# ವಿಷಯಸೂಚಿಕೆ.

ಶಾ·B·ಶಿ·

## ೧ ನೇ ಭಾಗ—ಬುದ್ಧನ ಚರಿತ್ರೆ.



---

## ೨ ನೇ ಭಾಗ—ಬುದ್ಧನ ತತ್ವೋಕ್ತಿಗಳು.

# ಶುದ್ಧಾಶುದ್ಧ ಪತ್ರಿಕೆ.

| ಅಶುದ್ಧ | ಶುದ್ಧ | ಪೇಜು | ಪಙ್ತಿ |
|---|---|---|---|
| ನಾಂತರ | ನಾಂತರಾ | i | 8 |
| ನೇದಲ್ಲಿಯೂ | ನೇದರಲ್ಲಿಯೂ | ii | 24 |
| ಕೃಷ್ಣಗೌತಮಿ | ಕೃಷ್ಣಾಗೌತಮಿ | 9 | 26 |
| ಜಿತನಾಗುವೆ | ಜಿನನಾಗುವೆ | 12 | 22 |
| ಶಯನಾಗೃಹ | ಶಯನಗೃಹ | 16,23 | 13,2 |
| ಕೊಟ್ಟು | ಕೊಟ್ಟು | 17 | 1 |
| ಇದಕ್ಕಿತತಿಶಯವಾದ | ಇದಕ್ಕಿಂತತಿಶಯವಾದ | 20 | 11 |
| ಯತ್ಯಾಶ್ರಮನ್ನು | ಯತ್ಯಾಶ್ರಮವನ್ನು | 23 | 2 |
| ಬದ್ಧನನ್ನು | ಬುದ್ಧನನ್ನು | 23 | 18 |
| ಕೇವಲ ಜ್ಞಾನವು | ಕೇವಲ ಅಜ್ಞಾನವು | 28 | 10 |
| ನಾಶಪಡಿದಲ್ಲಿ | ನಾಶಪಡಿಸಿದಲ್ಲಿ | 29 | 21 |
| ದೇಹಾಭಿಮನವನ್ನು | ದೇಹಾಭಿಮಾನವನ್ನು | 34 | 7 |
| ಪತಿವೋಹತನ್ನು | ಪತಿವೋಹವನ್ನು | 36 | 23 |
| ಕೊಡುತ್ತಿದ್ಧಿನು | ಕೊಡುತ್ತಿದ್ದೆನು | 37 | 27 |
| ರುದ್ಧಅನಿ | ಅನಿರುದ್ಧ | 38 | 27 |

# ಪ್ರಾರ್ಥನೆ.

---

ನಿಷ್ಪಕ್ಷಪಾತಿಗಳಾದ ಮಹನೀಯರೇ? ೫. ೮. ೨೬.

ಈಗ ಕೆಲವು ಸಂವತ್ಸರಗಳ ಹಿಂದೆಯಿದ್ದ ನನ್ನ ನಡತೆಯ ವಿಷಯದಲ್ಲಿ ನನ್ನ ಬಂಧು ಸನ್ಮಿತ್ರರಲ್ಲಿ ಕೆಲವರಿಗೆ ವ್ಯಾಕುಲವುಂಟಾಗಿ ಯಾವ ರೀತಿಯಲ್ಲಾದರೂ ನನ್ನನ್ನು ಸನ್ಮಾರ್ಗಕ್ಕೆ ತರಬೇಕೆಂದು ಮಾಡಿದ ಪ್ರಯತ್ನಗಳೆಲ್ಲಾ ನಿಷ್ಫಲತ್ವದೊಡನೆ ಪರಿಣಮಿಸಿದವಾದ ಪ್ರಯುಕ್ತ, ಇದು ಪುರಾಕೃತವೆಂದು ಭಾವಿಸಿ ತಟಸ್ಥರಾದರು. ಹೀಗೆಯೇ ಕೆಲವು ಕಾಲ ಗತಿಸಿದನಂತರ ಶಂಕರವಿರಚಿತವಾದ ಮಹಾವಾಕ್ಯದರ್ಪಣದಲ್ಲಿ "ನಾಂತರ ಬ್ರಹ್ಮವಿಜ್ಞಾನಂ, ಪ್ರಸಾದಾದಂತರಾತ್ಮನಃ" ಎಂಬದಾಗಿಯೂ, ಮತ್ತು ಭಗವದ್ಗೀತೆಯಲ್ಲಿ, "ಉದ್ಧರೇದಾತ್ಮನಾತ್ಮನಂ" ಎಂಬದಾಗಿಯೂ ಮತ್ತು ಈ ಗ್ರಂಥದಲ್ಲಿಯೇ ಬುದ್ಧನು ಹೇಳಿರುವ ಧರ್ಮಪಾದದ ೩ ನೇ ವಾಕ್ಯದಲ್ಲಿ ಮನುಷ್ಯನು ಪರಿಶುದ್ಧನಾಗಬೇಕಾದರೆ ತನ್ನಿಂದಲೇ ಪರಿಶುದ್ಧನಾಗಬೇಕು" ಎಂಬ ವಚನಗಳಿಗೆ ಅನುಸಾರವಾಗಿ, ನನ್ನ ಹೃದಯಾಂಕಣದಲ್ಲಿ ನೆಲಸಿರುವ ಅಂತರಾತ್ಮನ ಪ್ರಸಾದವೆಂಬ ಅಗ್ನಿಯು ಅಂಕುರಿಸಿದ ಸ್ವಲ್ಪ ಕಾಲದಲ್ಲಿಯೇ ಸತ್ಸಂಗವೆಂಬ ಮಾರುತನ ಸಹಾಯದಿಂದ ಪ್ರಜ್ವಲಿಸಲು ಆ ಸನ್ಮಿತ್ರರೊಡನೆ ಸೇರಿ ಸನ್ಮಾರ್ಗಕ್ಕೆ ಗಮನಕೊಡಬೇಕಾಗಿ ಬುದ್ಧಿಯು ಗಮಿಸಿತು. ಅನಂತರ ಶ್ರೀರಾಮಕೃಷ್ಣ ಪರಮಹಂಸರ ವೇದಾಂತ ಮುಕ್ತಾವಳಿಯಲ್ಲಿ "ಅನೇಕ ಸಂವತ್ಸರಗಳಿಂದಲೂ ಕತ್ತಲೆಯಿಂದ ಕೂಡಿದ ಮನೆಗೆ ದೀಪವನ್ನು ತೆಗೆದುಕೊಂಡು ಹೋದ ಒಡನೆಯೇ ಆ ಕತ್ತಲೆಯ ಸಮೂಹವೆಲ್ಲಾ ಹ್ಯಾಗೆ ನಾಶವಾಗುವದೋ ಅದರಂತೆ, ಮೋಹಾಂಧಕಾರದಲ್ಲಿ ಅಡಗಿದ್ದ ಮನುಷ್ಯನಿಗೆ ಜ್ಞಾನಜ್ಯೋತಿಯು ಅಂಕುರಿಸಿದ ಒಡನೆಯೇ, ಅನೇಕ ಜನ್ಮಸಂಚಿತ

ವಾದ ಅಜ್ಞಾನವೆಲ್ಲಾ ನಾಶಹೊಂದುತ್ತದೆ" ಎಂದು ಹೇಳಿರುವುದಕ್ಕೆ ಅನುಸಾರವಾಗಿ, ನನ್ನ ದೋಷಗಳೇ ನನಗೆ ಅಸಹ್ಯಕರವಾಗಿಯೂ, ಮತ್ತು ಶತ್ರುಗಳಾಗಿಯೂ ಕಂಡುಬಂದದ್ದರಿಂದ, ಈ ಜನ್ಮವನ್ನು ಯಾವರೀತಿಯಲ್ಲಾದರೂ ಸಾರ್ಥಕಪಡಿಸಬೇಕೆಂದು ನನ್ನಲ್ಲಿಯೇ ನಾನು ಯೋಚಿಸಿ, ಇನ್ಯಾವ ಉಪಾಯವನ್ನೂ ಕಾಣದೆ, ಸ್ವಸ್ವರೂಪ ಪರಿಜ್ಞಾನವನ್ನುಂಟುಮಾಡುವ ಮತವಿಷಯವೇ ಸತ್ಪಥವಾಗಿ ತೋರಿಬಂದದ್ದರಿಂದ, ಮತಗ್ರಂಥಗಳನ್ನೇ ಓದಬೇಕೆಂಬ ಕುತೂಹಲ ಉಂಟಾಗಿ, ನಮ್ಮ ಸರ್ವೋತ್ತಮವಾದ ವೇದಾಂತ ಗ್ರಂಥಗಳನ್ನು "ಥಿಯಾಸೊಫಿ" (ಬ್ರಂಹಜ್ಞಾನ) ಎಂಬ ಉಪನೇತ್ರಗಳ ಸಹಾಯದಿಂದ ನನ್ನ ಅಲ್ಪಮತಿಗೆ ಗ್ರಾಹ್ಯವಾದ ಮಟ್ಟಿಗೆ ಗ್ರಹಿಸುತ್ತಾ ಬಂದೆನು. ಹೀಗೆಯೇ ಗ್ರಹಿಸುತ್ತಾ ಬರುವಲ್ಲಿ ನಮ್ಮ ವೇದಾಂತಕ್ಕೂ ಮತ್ತು ಬೌದ್ಧಮತಕ್ಕೂ ಅನೇಕ ವ್ಯತ್ಯಾಸಗಳಿರುವುದೆಂಬದಾಗಿಯೂ, ಮತ್ತು ಈ ಬೌದ್ಧ ಮತವು ಶೂನ್ಯವಾದವನ್ನು ಸಿದ್ಧಾಂತಪಡಿಸತಕ್ಕದ್ದಾಗಿರುವದರಿಂದ, ನಮ್ಮ ಮಧ್ವ, ರಾಮಾನುಜ, ಶಂಕರಾದಿ ಆಚಾರ್ಯರು ಬುದ್ಧಮತವನ್ನು ಖಂಡನೆಮಾಡಿ ವೇದಾಂತವನ್ನೇ ಸಿದ್ಧಾಂತಪಡಿಸಿರುತ್ತಾರೆಂಬದಾಗಿಯೂ ಸಹಾ ಶಂಕರವಿಜಯ, ಮಧ್ವವಿಜಯ ಮುಂತಾದ ಗ್ರಂಥಗಳಲ್ಲಿ ಓದಿದೆನಾದಕಾರಣ, ಇದರ ನಿಜಾಂಶವನ್ನು ಕಂಡು ಹಿಡಿಯಬೇಕಾದ ಕುತೂಹಲ ಉಂಟಾಗಿ, ಬೌದ್ಧಮತ ವಿಷಯವಾದ ಕೆಲವು ಗ್ರಂಥಗಳನ್ನು ಮನನ ಮಾಡಲು ಪ್ರಾರಂಭಿಸಿದೆನು. ಹಾಗೆಯೇ ಕೆಲವು ಕಾಲ ಸಾಧ್ಯವಾದ ಗಮನವನ್ನೆಲ್ಲಾ ಕೊಟ್ಟು ನೋಡುತ್ತಾ ಬರುವಲ್ಲಿ, ಈ ಬೌದ್ಧಮತವು ಚಾರ್ವಾಕ ಮತದಂತೆ ಶೂನ್ಯವಾದವನ್ನು ಎಂದಿಗೂ ಸಿದ್ಧಾಂತಪಡಿಸತಕ್ಕದ್ದಲ್ಲವೆಂಬುವುದು ತಿಳಿದು ಬಂದದ್ದಲ್ಲದೆ, ವೇದಾಂತದ ಗೂಢತತ್ವವನ್ನು ಬೋಧಿಸತಕ್ಕದ್ದಾಗಿರುವುದೆಂಬುವುದೂ ಸಹಾ ನನ್ನ ಅಲ್ಪಮತಿಗೆ ವ್ಯಕ್ತಪಟ್ಟಿರುವುದು. ಹ್ಯಾಗಂದರೆ—ನಮ್ಮಲ್ಲಿ ಸಗುಣೋಪಾಸಕರು ಆ ವಸ್ತುವಿಗೆ ಈಶ್ವರನೆಂಬ ನಾಮವನ್ನೂ, ಸೃಷ್ಟಿ, ಸ್ಥಿತಿ,

ಲಯಗಳೆಂಬ ಧರ್ಮವನ್ನೂ, ಆರೋಪಿಸುತ್ತಾರೆ. ಮತ್ತು ಕೆಲವು ವಾದಿಗಳು ಪರಾಪರವಸ್ತುವಿಗೆ ಬ್ರಹ್ಮನೆಂಬದಾಗಿಯೂ, ಮನುಷ್ಯ ಮುಂತಾದ ಸಕಲ ಜೀವಜಂತುಗಳಲ್ಲಿ ಅಡಗಿರುವ ಅದೇ ವಸ್ತುವಿಗೆ ಜೀವನೆಂಬದಾಗಿಯೂ ಸಹಾ ನಿಮಿತ್ತ ನಾಮಗಳನ್ನು ಆರೋಪಿಸುತ್ತಾರೆ. ಈ ಎರಡು ವಿಷಯಗಳಲ್ಲಿಯೂ ಹೇಳಿರುವ, ನಾಮ, ರೂಪ, ಗುಣ, ಕ್ರಿಯಾದಿಗಳು ಸ್ವಭಾವತಃ ಸುಳ್ಳಾದ್ದರಿಂದ, ಈ ಅಧ್ಯಾರೋಪಗಳನ್ನು ಬುದ್ಧನು ಒಪ್ಪುವದಿಲ್ಲವೇ ಹೊರತು, ನಾಮ, ರೂಪ, ಗುಣ, ಕ್ರಿಯಾ, ಶೂನ್ಯವಾದ ಸತ್ಯ ಚೈತನ್ಯವಿಲ್ಲವೆಂದು ಎಂದಿಗೂ ಹೇಳುವದಿಲ್ಲಾ. ಇದಕ್ಕೆ ಅನುಸಾರವಾಗಿ ನಮ್ಮ ವೇದಾಂತ ಮತಾವಲಂಬಿಗಳೂ ಸಹಾ ಒಪ್ಪುತ್ತಾರೆ. ಹಾಗೆ ಶೂನ್ಯವಾದವನ್ನೇ ಮಾಡುವವನಾಗಿದ್ದಲ್ಲಿ, ರಾಜ್ಯಭೋಗವನ್ನು ಮತ್ತು ಪತ್ನಿಪುತ್ರಾದಿಗಳನ್ನೂ ಸಹಾ, ಒಳ್ಳೇ ಯೌವನದಲ್ಲೇ ತ್ಯಜಿಸಿ, ಸನ್ಯಾಸವನ್ನು ವಹಿಸಿ, ಭಿಕ್ಷಾಟನೆಯಿಂದ ಜೀವಿಸುತ್ತಾ, ತಪಸ್ಸನ್ನು ಮಾಡಿ, ದೇಹವನ್ನು ದಂಡಿಸಬೇಕಾದ ಅವಶ್ಯಕವೇ ಇರಲಿಲ್ಲ. ಸೌಖ್ಯವಾಗಿ ಸಂಸಾರ ಭೋಗದಲ್ಲೇ ಇರುತ್ತಾ ಇದ್ದನು. ಅಲ್ಲದೆ ಯಾವ ಮನುಷ್ಯನೂ ಉದ್ದೇಶವಿಲ್ಲದೆ ಯಾವ ಕೆಲಸಕ್ಕೂ ಪ್ರಯತ್ನಿಸುವದಿಲ್ಲ. ಆದಕಾರಣ ಅವನನ್ನು ಶೂನ್ಯವಾದಿ ಎಂದು ಹೇಳಲು ಹ್ಯಾಗೆ ಆಗುವುದು ? ಅಲ್ಲದೆ ಮೇಲೆ ಹೇಳಿದ ನಾಮ, ರೂಪ, ಕ್ರಿಯಾದಿಗಳು ಆ ವಸ್ತುವಿಗೆ ಇಲ್ಲವೆಂಬುವುದನ್ನು ಬುದ್ಧನು ಹೇಳುವಂತೆಯೇ, ಮುಂಡಕೋಪನಿಷದ್, ಒಂದನೇ ಮುಂಡಕ ಒಂದನೇ ಖಂಡ ೫ನೇ ಅನುವಾಕ (I. 1. 5) ನೇದಲ್ಲಿಯೂ, ಮತ್ತು ಕಠೋಪನಿಷದ್ ಒಂದನೇ ಅಧ್ಯಾಯ ಮೂರನೇ ವಲ್ಲಿ ೧೫ನೇ ಅನುವಾಕ (1, 3, 15.) ನೇದಲ್ಲಿಯೂ, ದ್ವಿತಿಯಾಧ್ಯಾಯ ಪ್ರಥಮವಲ್ಲಿ ೩ನೇ ಅನುವಾಕ (2, 1, 3.) ನೇದಲ್ಲಿಯೂಮತ್ತು ಬೃಹದಾರಣ್ಯಕದಲ್ಲಿ ಆರನೇ ಅಧ್ಯಾಯ ನಾಲ್ಕನೇ ಬ್ರಾಹ್ಮಣ ೨೫ನೇ ಅನುವಾಕ (6, 4, 25) ಸಹಾ ಹೇಳಿ ಇರುವದರಿಂದ ಆ ಸತ್ಯವಸ್ತುವಿಗೆ ಈ ರೀತಿಯಾದ

ಅಧ್ಯಾರೋಪಗಳ್ಯಾವದೂ ಇಲ್ಲವೆಂದು ಸಿದ್ಧಾಂತವಾಗಿ ಕಂಡುಬರುವುದು. ಮತ್ತು ಸತ್ಯಜ್ಞಾನವು ಯಜ್ಞ ಯಾಗಾದಿಗಳಲ್ಲಿ ಪ್ರಾಣಿಗಳನ್ನು ಬಲಿ ಕೊಡುವುದರಿಂದಾಗಲಿ, ಅಥವಾ ವೇದಗಳನ್ನು ಗಿಳಿಯು ಹಾಗೆ ಬಾಯಿಗೆ ಕಂಠಪಾಠಮಾಡುವದರಿಂದಲೇ ಆಗಲಿ, ಕರ್ಮ ಮಾಡುವುದರಿಂದಲೇ ಆಗಲಿ, ಎಂದಿಗೂ ಉಂಟಾಗಲಾರದೆಂದು ಬುದ್ಧನು ಧರ್ಮಪಾದದ ೪೬ ನೇ ವಾಕ್ಯದಲ್ಲಿ ಹೇಳುವಂತೆ ಮುಂಡಕೋಪನಿಷದ್, ಮೂರನೇ ಮುಂಡಕ ಎರಡನೇ ಖಂಡ ಮೂರು ಮತ್ತು ನಾಲ್ಕು ಅನುವಾಕ (3, 2, 3. ಮತ್ತು 4.) ಒಂದನೇ ಮುಂಡಕ ಎರಡನೇ ಖಂಡ (7, 8, 9, 10.) ಅನುವಾಕ (3, 2, 3. 4.) ಮತ್ತು (1, 2. 7, 8, 9, 10) ನೇವರಲ್ಲಿಯೂ ಸಹಾ ಹೇಳಿಯಿದೆ. ಅಲ್ಲದೆ ಶ್ರೀ ಶಂಕರ ಭಗವತ್ಪಾದರವರೂ ಸಹಾ ಮಹಾವಾಕ್ಯದರ್ಪಣ, ವಿವೇಕಚೂಡಾಮಣಿ, ಮುಂತಾದ ವೇದಾಂತ ಗ್ರಂಥಗಳಲ್ಲೂ, ಮತ್ತು ಬ್ರಂಹಸೂತ್ರದಲ್ಲಿಯೂ ಸಹಾ ಸಿದ್ಧಾಂತ ಮಾಡಿದಾರೆ. ಅಲ್ಲದೆ ಬುದ್ಧನು ಪುನರ್ಜನ್ಮ, ಕರ್ಮ ಇವುಗಳನ್ನು ವೇದಾಂತಿಗಳಾದ ಮಹರ್ಷಿಯರು ಹೇಳುವಂತೆಯೂ ಸಹಾ ಹೇಳಿ ಇರುತ್ತಾನೆ. ಆದಕಾರಣ ಬುದ್ಧನು ವೇದಾಂತಿಗಳಾದವರು ಹ್ಯಾಗೆ ಹೇಳುತ್ತಾರೋ ಅದರಂತೆಯೇ ಅವನೂ ಸರ್ವದರಲ್ಲಿಯೂ ಒಪ್ಪುತ್ತಾನೆ. ಹಾಗೆಯೇ ನೋಡುತ್ತಾ ಬಂದಲ್ಲಿ ಬುದ್ಧನ ಬೋಧೆಯೂ, ಮತ್ತು ಉಪನಿಷದ್ವಾಕ್ಯಗಳೂ ಸಹಾ ಒಂದಕ್ಕೊಂದು ಸಮಂಜಸವನ್ನು ಹೊಂದುತ್ತವೆ. ಅಲ್ಲದೆ ಶಂಕರಾಚಾರ್ಯರ ಅಭಿಪ್ರಾಯವೆಲ್ಲಾ ಬುದ್ಧನ ಅಭಿಪ್ರಾಯವೇ ಆಗಿರುವುದು. ಹೀಗಿರುವಲ್ಲಿ ಬುದ್ಧನು ನಮ್ಮ ವೇದಾಂತವನ್ನು ಸಮಸ್ತರಿಗೂ ಬೋಧಿಸಿ ಉದ್ಧಾರ ಮಾಡಿರುವನೇ ಹೊರತು ವೇದಾಂತಕ್ಕೆ ವಿರುದ್ಧವಾಗಿ ಎಂದಿಗೂ ಹೇಳಿರುವುದಿಲ್ಲ. ಹ್ಯಾಗಂದರೆ :—ವೇದಾಂತಿಗಳು ಆತ್ಮೈಕ್ಯಕ್ಕೆ ಮುಕ್ತಿಯೆಂದು ಹೇಳುತ್ತಾರೆ. ಇದಕ್ಕೆ ಬುದ್ಧನು ನಿರ್ವಾಣವೆಂದು ಹೇಳುತ್ತಾನೆ. ಈ ಎರಡು ಶಬ್ದಗಳ ಅರ್ಥವೂ ಒಂದೇ ಆಗಿರುವುದು. ಇದು ಹಾಗಿರಲಿ ! ನಮ್ಮ ಆಚಾರ್ಯಾದಿಗಳು ಬೌದ್ಧ

ಮತವನ್ನು ಖಂಡನೆ ಮಾಡಿದರೆಂಬ ವಿಷಯವನ್ನು ಕುರಿತು ಸ್ವಲ್ಪ ಯೋಚಿಸೋಣ, ಈಗ ನಮ್ಮಲ್ಲಿ ಅದ್ವೈತಿಯು ಶಂಕರಾಚಾರ್ಯರ ಮುಖ್ಯಾಭಿಪ್ರಾಯವನ್ನು ತಿಳಿದುಕೊಳ್ಳದೆ ದ್ವೈತಿ, ವಿಶಿಷ್ಟಾದ್ವೈತಿಗಳನ್ನು ಹ್ಯಾಗೆ ದ್ವೇಷಿಸುತ್ತಾರೋ, ಮತ್ತು ದ್ವೈತಿ, ವಿಶಿಷ್ಟಾದ್ವೈತಿಗಳು ತಮ್ಮ ತಮ್ಮ ಆಚಾರ್ಯರ ಅಭಿಪ್ರಾಯವನ್ನೇ ತಿಳಿದುಕೊಳ್ಳದೆ ಅದ್ವೈತಿಯನ್ನು ಕಂಡಲ್ಲಿ ಹ್ಯಾಗೆ ದ್ವೇಷಿಸುತ್ತಾರೋ, ಮತ್ತು ಈ ರೀತಿ ಪರಸ್ಪರ ದ್ವೇಷಿಸುವುದರ ಮೂಲಕ "ಬ್ರಾಹ್ಮಣಾನಾಮಸಂಘಾತಂ" ಯೆಂಬುವುದಕ್ಕೆ ಸರಿಯಾಗಿ ಐಕ್ಯ ಮತ್ಯ ತಪ್ಪಿ ತಾವುಗಳೂ ಹೀನಸ್ಥಿತಿಗೆ ಬರುವುದಲ್ಲದೆ ಮತವನ್ನು ಮತ್ತು ರಾಜ್ಯವನ್ನೂ ಸಹಾ ಹೀನಸ್ಥಿತಿಗೆ ತಂದು ಇತರ ಮತದವರಿಗೆ ಹಾಸ್ಯಾಸ್ಪದವಾಗುವಂತೆ ಹ್ಯಾಗೆ ಮಾಡಿರುತ್ತಾರೋ ಅದರಂತೆ, ಬುದ್ಧನ ನಿಜಾಭಿಪ್ರಾಯವನ್ನು ತಿಳಿಯದ ಅವನ ಮತಾನುವರ್ತಿಗಳು ಇತರ ಮತದವರನ್ನು ದ್ವೇಷಿಸುವದಲ್ಲದೇ ಚಾರ್ವಾಕನಾಸ್ತಿಕರು ಬುದ್ಧನು ಶೂನ್ಯವಾದವನ್ನು ಸಿದ್ಧಾಂತಪಡಿಸಿ ಇರುವನು. ದೈವವಾದವನ್ನು ಮಾಡುವ ಇತರ ಮತಗಳೆಲ್ಲಾ ಅಪ್ರಯೋಜಕವಾದವುಗಳು, ನಮ್ಮ ಮತವೇ ಸರ್ವೋತ್ತಮವೆಂದು (ಈಗಿನ ಕ್ರಿಸ್ತಪಾದ್ರಿಗಳು ಹೇಳುವಂತೆ) ಅಜ್ಞಾನದಿಂದ ಹೇಳುತ್ತಾ ತಾವು ಹೀನಸ್ಥಿತಿಗೆ ಬರುವುದಲ್ಲದೆ ಮತವೈರದಿಂದ ಲೋಕವನ್ನೂ ಸಹಾ ಹಾಳುಮಾಡುತ್ತಾ ಬಂದ ಕಾಲದಲ್ಲಿ, ಇವರ ಅಜ್ಞಾನದಿಂದುಂಟಾದ ಹಾವಳಿಯನ್ನು ನಿಲ್ಲಿಸುವುದಕ್ಕಾಗಿ ನಮ್ಮ ಆಚಾರ್ಯಾದಿಗಳು ಬುದ್ಧ ಮತಾನುವರ್ತಿಗಳ ಅವಿವೇಕವನ್ನು ಖಂಡಿಸಿದರೇ ಹೊರ್ತು, ಬುದ್ಧನ ಸರ್ವೋತ್ತಮವಾದ ತತ್ವಾಭಿಪ್ರಾಯವನ್ನು ಎಂದಿಗೂ ಖಂಡಿಸಲಿಲ್ಲಾ. ಇನ್ನೂ ಅದನ್ನು ಉದ್ಧಾರಮಾಡಿರುವರೆಂದು ನನಗೆ ತೋರಿಬಂದಿರುವುದು. ಇದಕ್ಕನುಸಾರವಾಗಿ ಇದೇ ಪುಸ್ತಕದಲ್ಲಿ ಮುಂದೆ ಹೇಳಿರುವ ಧರ್ಮಪಾದದ ೪೭ ನೇ ಶ್ಲೋಕದಲ್ಲಿ ಬುದ್ಧನು ನಿರ್ವಾಣಪದವಿಯನ್ನು ಹೊಂದುವ ಕಾಲದಲ್ಲಿ ಹೇಳಿರುವಂತೆಯೇ, ವೇದಾಂತಿಗಳೂ

ಸಹಾ ||ಶ್ಲೋಕ|| ಎಲ್ಲಾಭಾನ್ನಾಪರೋಲಾಭಃ| ಯತ್ಸುಖಾನ್ನಾಪರಂ ಸುಖಂ|| ಯದ್ಜ್ಞಾನಾನ್ನಾಪರಂ ಜ್ಞಾನಂ| ತದ್ಬ್ರಹ್ಮೇತ್ಯವಧಾರಯೇತ್|| ಎಂದು ಹೇಳಿರುವರು. ಮತ್ತು ಇದೇ ಪುಸ್ತಕದಲ್ಲಿ ಬುದ್ಧನ ಅಂತ್ಯೋಕ್ತಿಯಲ್ಲಿ (ಕೊನೆವಾಕ್ಯದಲ್ಲಿ) ಮನುಷ್ಯನು ಮುಖ್ಯವಾಗಿ ತಿಳಿಯಬೇಕಾದ ಜ್ಞಾನವನ್ನು ಹೇಳಿರುವಂತೆಯೇ ವೇದಾಂತಿಗಳೂ ಸಹಾ "ಬ್ರಹ್ಮಸತ್ಯಂ ಜಗನ್ಮಿಥ್ಯಾ| ಜೀವೋ ಬ್ರಹ್ಮೈವ ನಾಪರಃ|| ಯೆಂದು ಹೇಳಿರುತ್ತಾರೆ. ಇವುಗಳ ಅರ್ಥಗಳನ್ನು ಹೋಲಿಸಿ ನೋಡಿದಲ್ಲಿ ಒಂದೇ ಅರ್ಥವನ್ನು ಕೊಡುವುದು. ಇದರಂತೆಯೇ ಅನೇಕ ಸಮಂಜಸ ವಾಕ್ಯಗಳನ್ನು ಇಲ್ಲಿ ಬರಿಯಲು ಸ್ಥಳಸಂಕೋಚದಿಂದ ಅವಕಾಶವಿಲ್ಲಾ. ಇಷ್ಟು ವಿಷಯಗಳನ್ನೆಲ್ಲಾ ನೋಡಿದಲ್ಲಿ ಬೌದ್ಧ ಮತವು ವೇದಾಂತ ಮತವನ್ನೇ ಅನುಸರಿಸಿದ್ದಾಗಿರುವುದೆಂದು ದೃಢವಾಗಿ ಹೇಳಬಹುದು. ಹೀಗಿರುವಲ್ಲಿ ಕರ್ಮಠರಾಗಿರುವ ನಮ್ಮ ಪೌರಾಣಿಕಾದಿಗಳು ಹಿಂಸಾರೂಪವಾದ ಯಜ್ಞಯಾಗಾದಿಗಳನ್ನು ಅಪ್ರಯೋಜಕವೆಂದು ಬುದ್ಧನು ಖಂಡಿಸಿರುವದರಿಂದ ತಾವು ಕರ್ಮವ್ಯಾಜದಿಂದ ಉದರ ಪೋಷಣೆ ಮಾಡುವದಕ್ಕೆ ವಿರೋಧವಾಗಿರುವುದೆಂದು ಭಾವಿಸಿ, ದ್ವೇಷವನ್ನು ತಾಳಿ, ಈ ದಿವ್ಯ ತತ್ವವನ್ನು ಪ್ರಚುರಗೊಳಿಸದೆ, ಅವರ ವಿಷಯದಲ್ಲಿ ಸುಳ್ಳಾದ ಚಾರ್ವಾಕ ದೋಷವನ್ನು ಆರೋಪಿಸಿ ದೂಷಿಸಿರುವುದಲ್ಲದೆ ಮತವೈರದಿಂದ ಆ ಸರ್ವೋತ್ತಮ ತತ್ವವನ್ನು ನಾಶಪಡಿಸಿ ಇರುತ್ತಾರೆ. ಪಶ್ಚಿಮ ಖಂಡದವರಾದರೋ ಈ ಉತ್ತಮ ತತ್ವವನ್ನು ಬಹು ಭಕ್ತಿಯಿಂದ ಗೌರವಿಸುತ್ತಾ ಈ ಮತ ವಿಷಯವಾಗಿ ಅನೇಕ ಗ್ರಂಥಗಳನ್ನು ಪ್ರಚುರಗೊಳಿಸಿರುತ್ತಾರೆ. ಅಲ್ಲದೆ ಯೇಸುಕ್ರಿಸ್ತನ ಮತವು ಈ ಬುದ್ಧನ ದಿವ್ಯ ತತ್ವಗಳ ಸಾರಗ್ರಹಣದಿಂದ ಹುಟ್ಟಿದ್ದಾಗಿದೆ. ನಾವುಗಳಾದರೋ, ಈ ಬುದ್ಧನು ನಮ್ಮ ಮಾತೃದೇಶದಲ್ಲಿ ಅವತರಿಸಿದವನಾಗಿಯೂ, ಮತ್ತು ನಮ್ಮ ವೇದ, ಉಪನಿಷತ್ತುಗಳಲ್ಲಿ ಅಡಗಿ ಇರುವ ಗೂಢಾರ್ಥಗಳನ್ನೆಲ್ಲಾ ಈಗಿನ ಕಾಲದ ನಮ್ಮ ವೈದಿಕರಂತೆ ಮುಚ್ಚಿಡದೆ, ಪರೋಪ

ಕಾರಾರ್ಥವಾಗಿ ಪ್ರಪಂಚಕ್ಕೆಲ್ಲಾ ಬೋಧೆಮಾಡಿ ತನ್ಮೂಲಕ ನಮ್ಮ ಮತವನ್ನು ಪ್ರಕಾಶಗೊಳಿಸಿ, ನಮ್ಮ ದೇಶಕ್ಕೂ ಮತ್ತು ನಮ್ಮ ಮತಕ್ಕೂ ಸಹಾ ನಿರಂತರವಾದ ಯಶಸ್ಸನ್ನು ಉಂಟುಮಾಡಿದವನಾದಾಗ್ಯೂ, ನಾವುಗಳು ಅಜ್ಞಾನದಿಂದ ದೂಷಿಸುತ್ತಿದ್ದೆವಲ್ಲಾ! ಎಂಬ ಪಶ್ಚಾತ್ತಾಪ ಉಂಟಾದ್ದರಿಂದ, ಈ ಸರ್ವೋತ್ತಮ ತತ್ವವನ್ನು ತಮ್ಮಗಳ ಅವಗಾಹನೆಗೆ ತರಬೇಕೆಂದು ಪ್ರಯತ್ನ ಪಟ್ಟು ಈ ಪುಸ್ತಕವನ್ನು ಬುದ್ಧ ಸಮ್ಮಂಧವಾದ ಅನೇಕ ಗ್ರಂಥಗಳ ಸಾರಗ್ರಹಣದಿಂದ ವಿರಚಿಸಿರುವೆನು. ವಾಚಕಮಹಾಶಯರೇ, ಈ ಪುಸ್ತಕದಲ್ಲಿ ವಿವರಿಸಿರುವ ಬುದ್ಧನ ಜೀವಮಾನ ಚರಿತ್ರೆಯಲ್ಲಿಯೂ, ಮತ್ತು ಇವನು ಪ್ರಪಂಚಕ್ಕೆ ಬೋಧೆಮಾಡಿದ ತತ್ವಗಳನ್ನೂ ಸಹಾ ಪರಿಶೀಲಿಸಿ ನೋಡುತ್ತಾ ಬಂದಲ್ಲಿ, ಆ ಬುದ್ಧ ದೇವರ ಯೋಚನಾಶಕ್ತಿಯು ವೈರಾಗ್ಯವು, ನಿಶ್ಚಯ ಜ್ಞಾನವು, ಅಭೇದ ಭಾವನೆಯೂ, ಮತ್ತು ಸರ್ವೋತ್ತಮವಾದ ಪರೋಪಕಾರ ಬುದ್ಧಿಯೂ ಸಹಾ, ನಿಮ್ಮಗಳ ಹೃದಯಗಳಿಗೆ ಪರಮಾನಂದವನ್ನುಂಟುಮಾಡುವುದೆಂದು ದೃಢವಾಗಿ ನಂಬುತ್ತೇನೆ. ಹೀಗಿರುವಲ್ಲಿ ಈ ತತ್ವವನ್ನು ಮತವೈರ ಉಳ್ಳ ಅಜ್ಞಾನಿಯು ದೂಷಿಸಬೇಕೇ ವಿನಹಾ, ನಿಷ್ಪಕ್ಷಪಾತಿಯಾದ ವಿವೇಕಿಯು ದೂಷಿಸಲು ಅವನ ನಾಲಿಗೆಯು ಎಂದಿಗೂ ಪ್ರಯತ್ನಪಡಲಾರದು, ಅಲ್ಲದೆ ಅವನ ಅಂತರಾತ್ಮನು ಎಂದಿಗೂ ಸಮ್ಮತಿಪಡನು. ಈ ಗ್ರಂಥವನ್ನು ಬರಿಯಲು ಆರಂಭಿಸಿದಾರಭ್ಯ ನಮ್ಮ ಮಂತ್ರದ್ರಷ್ಟರಾದ ಋಷಿಗಳಲ್ಲಿ ನನಗೆ ಯಾವ ಭಕ್ತಿಯಿರುವುದೋ, ಮತ್ತು ನಮ್ಮ ಆಚಾರ್ಯಾದಿಗಳಲ್ಲಿ ಯಾವ ಗುರುಭಾವನೆಯಿರುವುದೋ, ಮತ್ತು ನಮ್ಮ ವೇದಾಂತದಲ್ಲಿ ಯಾವರೀತಿಯಾದ ಪೂಜ್ಯಭಾವನೆಯು ಇರುವುದೋ, ಅವುಗಳೆಲ್ಲಾ ನನಗೆ ಈ ನಿರ್ದೋಷಿಯಾದ ಬುದ್ಧ ದೇವರಲ್ಲಿಯೂ, ಮತ್ತು ಪರಿಶುದ್ಧವಾದ ಅವನ ತತ್ವದಲ್ಲಿಯೂ, ಸಹಾ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಸಮಾನವಾಗಿರುವುದೆಂದು ಆತ್ಮಸಾಕ್ಷಿಯಾಗಿ ಹೇಳುವೆನು. ಇಷ್ಟರ ಮೇಲೆಯೂ ಈ ತತ್ವವನ್ನು ದೂಷಿಸ

ತಕ್ಕವರ ವಿಷಯದಲ್ಲಿ ನಾನು ಏನೂ ಹೇಳಲಾರೆನು. ಆದಪ್ರಯುಕ್ತ ಈ ತತ್ವವನ್ನು ವಾಚಕರು ನಿಷ್ಪಕ್ಷಪಾತವಾದ ಭಾವನೆಯಿಂದ ಓದಿ, ಅದರಿಂದ ಲಭಿಸುವ ಆನಂದವೇ ನನ್ನ ಆನಂದವು, ಮತ್ತು ನನ್ನ ಶ್ರಮಕ್ಕೆ ಸಾರ್ಥಕವು. ವಾಚಕಮಹಾಶಯರೇ! ಪ್ರಕೃತದಲ್ಲಿ ನಮ್ಮ ಮಾತೃಭಾಷೆಗಳೆಲ್ಲಾ ಹೀನಸ್ಥಿತಿಗೆ ಬಂದು ಎಲ್ಲಿ ನೋಡಿದಾಗ್ಯೂ ಹೂಣ ಭಾಷೆಯೇ ಪ್ರಚಾರಕ್ಕೆ ಬಂದಿರುವುದಲ್ಲದೆ ನಮ್ಮ ಮಾತೃಭಾಷೆಯಾದ ಕನ್ನಡಕ್ಕೆ ಲೇಶವೂ ಪ್ರೋತ್ಸಾಹವಿಲ್ಲದಿರುವದರಿಂದ ಈ ಪುಸ್ತಕವನ್ನು ವಿಸ್ತರಿಸಿ ಬರಿಯಲು ಭೀತಿಯುಂಟಾಗಿ, ಬುದ್ಧ ದೇವರ ಜೀವಮಾನ ಚರಿತ್ರೆ ಮತ್ತು ಈತನು ಪ್ರಪಂಚಕ್ಕೆ ಬೋಧೆಮಾಡಿದ ತತ್ವೋಕ್ತಿಗಳನ್ನು ಮಾತ್ರ ಬರದಿರುವೆನು. ಆದ ಪ್ರಯುಕ್ತ ಈ ಅಲ್ಪಮತಿಯಾದ ನನ್ನ ಪ್ರಥಮ ಪ್ರಯತ್ನವಾದ ಈ ಪುಸ್ತಕದಲ್ಲಿ ದೋಷಗಳೇನಾದರೂ ಕಂಡುಬಂದಲ್ಲಿ ಅವುಗಳನ್ನು ನನ್ನ ಗಮನಕ್ಕೆ ತಂದಲ್ಲಿ ಕೃತಜ್ಞತೆಯಿಂದ ಸ್ವೀಕರಿಸಿ ದ್ವಿತೀಯ ಮುದ್ರಣದಲ್ಲಿ ತಿದ್ದಿಕೊಳ್ಳುವದಲ್ಲದೆ ಇದನ್ನು ಸಾಧ್ಯವಾದ ಮಟ್ಟಿಗೆ ಪ್ರಚುರಗೊಳಿಸಬೇಕಾಗಿ ಬೇಡುವ

ಸತ್ಯವಾದಿಗಳ ಪಾದಕಿಂಕರ,

ಬೆಂಗಳೂರು,
೨೦—೧೨—೧೯೦೩.

ಬಿದರೆ ಅಶ್ವತ್ಥನಾರಾಯಣ,
೧೫ ನೇ ಬಳೇಪೇಟೆ, ಬೆಂಗಳೂರು.

# SIMILARITIES BETWEEN VEDANTA AND BUDDHISM.

## ವೇದಾಂತವಾಕ್ಯ ಮತ್ತು ಬುದ್ಧೋಕ್ತಿಗಳ ಐಕಕಂಠ್ಯ.

| ವಿಷಯ. | ವೇದಾಂತ ಪ್ರಮಾಣ. | ಬುದ್ಧೋಕ್ತಿಗಳು. |
|---|---|---|
| I. ರೂಪ, ನಾಮ, ಕ್ರಿಯಾ, ರಹಿತವಾದದ್ದೇ ಸತ್ಯವು. | ಕಠೋಪನಿಷದ್ ೧ ನೇ ಅಧ್ಯಾಯ ೩ ನೇ ವಲ್ಲಿ ೧೫ ನೇ ಅನುವಾಕ :—<br>" ಅಶಬ್ದಮಸ್ಪರ್ಶ ಮರೂಪ ಮವ್ಯಯಂ \|<br>ತಥಾರಸಂ ನಿತ್ಯಮಗಂಧ ವಚ್ಚಯತ್ \|\|<br>ಅನಾದ್ಯನಂತಂ ಮಹತಃ ಪರಂಧ್ರುವಂ \|<br>ನಿಚಾಯ್ಯತನ್ಮೃತ್ಯು ಮುಖಾತ್ಪ್ರಮುಚ್ಯತೆ\|\| | :—ಧರ್ಮಪಾದ ೫೩ ನೇ ವಾಕ್ಯ (ಪೇಜ್ ೫೯) ನೇ ದರಲ್ಲಿಯೂ, ಮತ್ತು (ಪೇಜ್ ೨೦, ಪಂಗ್ತಿ ೧೬ ರಿಂದ ೧೯) ದರಲ್ಲಿಯೂ ಸಹಾ ಹೇಳಿಯಿದೆ. |
| II. ಯಜ್ಞಯಾಗಾದಿ ಕರ್ಮದಿಂದ ಮುಕ್ತಿಯಿಲ್ಲವು. | " ಮುಂಡಕೋಪನಿಷದ್ ೩ ನೇ ಮುಂಡಕ ೧ ನೇ ಖಂಡ ೮ ನೇ ಅನುವಾಕ :—<br>" ನಚಕ್ಷುಷಾಗೃಹ್ಯತೆ ನಾಪಿವಾಚಾ \|<br>ನಾನ್ಯೈರ್ದೇವೈಸ್ತಪ ಸಾಕರ್ಮಣಾವಾ \|\|<br>ಜ್ಞಾನಪ್ರಸಾದೇನ ವಿಶುದ್ಧಸತ್ವಃ \|<br>ತತಸ್ತುತಂ ನಿಷ್ಕಲಂಧ್ಯಾಯಮಾನಃ \|\|<br>ಮತ್ತು<br>ಶಂಕರ ಭಗವತ್ಪಾದರು ವಿವೇಕ ಚೂಡಾಮಣಿಯಲ್ಲಿ :—<br>ವದಂತು ಶಾಸ್ತ್ರಾಣಿ ಯಜಂತುದೇವಾನ್ \|<br>ಕುರ್ವಂತುಕರ್ಮಾಣಿ ಭಜಂತುದೇವತಾಃ \|\|<br>ಆತ್ಮೈಕ್ಯಬೋಧೇನ ವಿನಾಪಿಮುಕ್ತಿಃ \|<br>ನಸಿಧ್ಯತಿಬ್ರಹ್ಮಶತಾಂತರೇಪಿ \|\| | :—ಧರ್ಮಪಾದದ ೪೬ ನೇ ವಾಕ್ಯ (ಪೇಜ್ ೫೮) ದಲ್ಲಿ ಹೇಳಿದೆ. ಮತ್ತು (ಪೇಜ್ ೨೮ ಪಂಗ್ತಿ ೧೨ ರಿಂದ ೨೮)ರ ವರಿಗೂ ಹೇಳಿದೆ. |
| III. ಜ್ಞಾನಿಯ ಲಕ್ಷಣ. | " ಭಗವದ್ಗೀತೆ ೮ ನೇ ಅಧ್ಯಾಯದಲ್ಲಿ :—<br>" ಬ್ರಹ್ಮಣ್ಯಾಧಾಯಕರ್ಮಾಣಿ \|<br>ಸಂಗತ್ಯಕ್ತ್ವಾ ಕರೋತಿಯಃ \|\|<br>ಲಿಪ್ಯತೇನ ಸಪಾಪೇಭ್ಯೋ \|<br>ಪದ್ಮಪತ್ರಮಿವಾಂಭಸಾ \|\| | :—ಧರ್ಮಪಾದದ ೪೯ ನೇ ವಾಕ್ಯ (ಪೇಜ್ ೫೯) ನೇ ದರಲ್ಲಿ ಹೇಳಿದೆ. |
| IV. ಪ್ರಪಂಚ ಮಿಥ್ಯವು, ಚೈತನ್ಯವೇ ಸತ್ಯವು. | " ವೇದಾಂತವಾಕ್ಯದಲ್ಲಿ :—<br>" ಬ್ರಹ್ಮಸತ್ಯಂ ಜಗನ್ಮಿಥ್ಯಾ \|<br>ಜೀವೋಬ್ರಹ್ಮೈವನಾಪರಃ \|\| | :—ಧರ್ಮಪಾದದ ೧೪ ನೇ ವಾಕ್ಯ (ಪೇಜ್ ೫೦) ಮತ್ತು ಬುದ್ಧನ ಅಂತ್ಯೋಕ್ತಿ ೩ ನೇ ವಾಕ್ಯ (ಪೇಜ್ ೬೨) ನೇ ದರಲ್ಲಿ ಹೇಳಿದೆ. |
| V. ಪುನರ್ಜನ್ಮ ಮತ್ತು ಕರ್ಮ. | ಮುಂಡಕೋಪನಿಷದ್ ೩ ನೇ ಮುಂಡಕ ೧ ನೇ ಖಂಡ ೧೦ ನೇ ಅನುವಾಕ :—<br>" ಯಂಯಂ ಲೋಕಂಮನಸಾಸಂ ವಿಭಾತಿ \|<br>ವಿಶುದ್ಧಸತ್ವಃ ಕಾಮಯತೆ ಯಾಂಶ್ಚಕಾಮಾನ್ \|\|<br>ತಂತಂ ಲೋಕಂಜಯತೇ ತಾಂಶ್ಚಕಾಮಾಂ \|<br>ಸ್ತಸ್ಮಾದಾತ್ಮಜ್ಞಂಹ್ಯರ್ಚಯೇ ದ್ಭೂತಿಕಾಮಃ \|\| | :—ಧರ್ಮಪಾದದ ೨, ೩ ಮತ್ತು ೧೧ ನೇ ವಾಕ್ಯ (ಪೇಜ್ ೪೮, ೫೦) ದಲ್ಲಿ ಹೇಳಿದೆ. |

# ಬುದ್ಧನ ಚರಿತ್ರೆ.

---

## ಬುದ್ಧನ ಜನನ.

ಈಗ ಸುಮಾರು ೨೪೦೦ ವರ್ಷಗಳ ಕೆಳಗೆ ಇಕ್ಷ್ವಾಕು ವಂಶೀಭೂತನಾದ ಶಾಕ್ಯರಾಜ, ಅಥವಾ ಶುದ್ಧೋದನನೆಂಬ ಧೊರೆಯು ಕಪಿಲವಸ್ತು ರಾಜ್ಯವನ್ನು ಧರ್ಮದಿಂದ ಪರಿಪಾಲನೆ ಮಾಡುತ್ತಾ ಇದ್ದನು. ಆತನ ಧರ್ಮಪತ್ನಿಯಾದ "ಮಾಯಾದೇವಿಯು" ಕಮಲದಂತೆ ಮನೋಹರವಾದ ಸೌಂದರ್ಯಶಾಲಿನಿಯಾಗಿಯೂ, ಕುಮುದದಂತೆ ನಿಷ್ಕಲ್ಮಷಹೃದಯಳಾಗಿಯೂ, ಮತ್ತು ಪಾತಿವ್ರತ್ಯ ಧರ್ಮದಿಂದಲೂ ಸಹಾ ಪ್ರಕಾಶಿಸುತ್ತಾ ಇದ್ದಳು. ಈಕೆಯ ಪತಿಯಾದ ಶುದ್ಧೋದನನು ತನ್ನ ಪಟ್ಟಮಹಿಷಿಯಲ್ಲಿ ಕಂಡುಬರುವ ಪಾತಿವ್ರತ್ಯಕ್ಕೂ, ನೈರ್ಮಲ್ಯತೆಗೂ, ಧರ್ಮಬುದ್ಧಿಗೂ, ಇವುಗಳಿಗಿಂತತಿಶಯವಾದ ಸತ್ಯತೆಗೂ ಸಹಾ ಪರಮಾನಂದಭರಿತನಾಗಿ ಆಕೆಯಲ್ಲಿ ಬಹು ಪ್ರೀತಿಯನ್ನು ಮತ್ತು ಗೌರವವನ್ನೂ ಸಹಾ ಇಟ್ಟಿದ್ದನು. ಹೀಗಿರುವಲ್ಲಿ ಗರ್ಭಿಣಿಯಾದ ಮಾಯಾದೇವಿಯು ತನಗೆ ಪ್ರಸುವಕಾಲವು ಪ್ರಾಪ್ತವಾಗುವದನ್ನರಿತು ಜನನಾಭ್ಯುದಯಕ್ಕಾಗಿ ತನ್ನ ತೌರು ಮನೆಗೆ ಶುಭಪ್ರಯಾಣವನ್ನು ಬೆಳೆಯಿಸಬೇಕೆಂದು ಪತಿಯನ್ನು ಪ್ರಾರ್ಥಿಸಿದಳು. ಒಡನೆಯೇ ಶುದ್ಧೋದನನು ತನಗೆ ಪುತ್ರಲಾಭವಾಗುವದೆಂಬ ಸಂತೋಷವನ್ನು ತಾಳಿ ತನ್ನ ಪ್ರಿಯಪತ್ನಿಯ ಮನೋಗತವನ್ನು ನೆರವೇರಿಸುವದಾಗಿ ವಾಗ್ದಾನ ಮಾಡಿ ಪ್ರಯಾಣವನ್ನು ಬೆಳೆಯಿಸುವಂತೆ ಅಪ್ಪಣೆಕೊಟ್ಟನು. ಪೂರ್ಣ ಗರ್ಭಿಣಿಯಾಗಿದ್ದ ಮಾಯಾದೇವಿಯು "ಲುಂಬಿನಿ" ಎಂಬ ತನ್ನ ಪತಿಯ ಉದ್ಯಾನಮಾರ್ಗವಾಗಿ

ಪ್ರಯಾಣವನ್ನು ಬೆಳೆಯಿಸುತ್ತಾ ಇರುವ ಕಾಲಕ್ಕೆ ಆ ಉದ್ಯಾನದ ಮನೋಹರವಾದ ನೋಟಕ್ಕೂ, ತಂಪಾದ ಮಂದಮಾರುತನ ಸ್ಪರ್ಶಕ್ಕೂ, ನವವಿಕಸಿತವಾದ ಪುಷ್ಪಲತೆಗಳ ಪರಿಮಳಕ್ಕೂ ಸಹಾ, ಹೃದಯದಲ್ಲಿ ಕಂಪ ಉಂಟಾಗಿ ಒಂದು ಉನ್ನತವಾದ ಬೂರುಗವೃಕ್ಷದ ನೆಳಲಿನಲ್ಲಿ ರಥವನ್ನು ಇಳಿದು ಅಲ್ಲಿ ಕೋಮಲವಾಗಿ ಬೆಳೆದಿದ್ದ ಗರಿಕೆ ಹುಲ್ಲಿನಮೇಲೆ ಪ್ರಸುವೇದನೆಯಿಂದ ಕುಳಿತಳು. ಆ ಕಾಲಕ್ಕೆ ಜನನಮುಹೂರ್ತವು ಒದಗಲು ಆಕೆಯ ಗರ್ಭಾಂಬುಧಿಯಿಂದ ಉದಯಕಾಲದ ಸೂರ್ಯನಂತೆ ಪ್ರಕಾಶಮಾನವಾಗಿಯೂ, ಶುದ್ಧವಾಗಿಯೂ ಇರುವ ಬಾಲ ಶಿಶುವು ಉದ್ಭವಿಸಿತು.

## ಜನನಕಾಲದಲ್ಲಿ ಉಂಟಾದ ಶುಭಲಕ್ಷಣಗಳು.

ಆ ಶಿಶುವು ಜನಿಸಿದ ಮುಹೂರ್ತದಲ್ಲೆ ಪ್ರಪಂಚವೆಲ್ಲಾ ಕಾಂತಿಯುಕ್ತವಾದದ್ದಾಯಿತು. ಈ ಜನನವೈಭವವನ್ನು ತಿಳಿದ ಜಾತ್ಯಂಧರಿಗೆಲ್ಲಾ ನೇತ್ರಗಳಲ್ಲಿ ದೃಷ್ಟಿಯುಂಟಾಗಿ ಈ ಶಿಶುವನ್ನು ನೋಡುವದಕ್ಕೆ ಆತುರದಿಂದ ಬಂದರು. ಮತ್ತು ಮೂಕ ಬಧಿರರೆಲ್ಲಾ ಅನ್ಯೋನ್ಯ ಸಂಭಾಷಣೆಗಳನ್ನಾಡತೊಡಗಿದರು. ವಕ್ರಾಂಗಿಗಳೆಲ್ಲಾ ಸಮಾಂಗಿಗಳಾದರು. ಹೆಳವರಿಗೆಲ್ಲಾ ಗಮನಶಕ್ತಿಯುಂಟಾಯಿತು. ಆ ಪಟ್ಟಣದ ಕಾರಾಗೃಹವಾಸಿಗಳಿಗೆಲ್ಲಾ ಬಂಧವಿಮೋಚನೆಯಾದವು. ನರಕಲೋಕದ ಕ್ರೂರಾಗ್ನಿಗಳೆಲ್ಲಾ ನಂದಿಹೋದವು. ಮತ್ತು ಆಕಾಶವು ನೈರ್ಮಲ್ಯವನ್ನು ಹೊಂದಿತು. ದೇವದುಂದುಭಿಗಳು ಮೊಳಗಿದವು. ಲೋಕಕ್ಕೆಲ್ಲಾ ಶಾಂತತೆಯು ಆವಿರ್ಭವಿಸಿತು. ಈ ರೀತಿಯಾಗಿ ಸರ್ವಲೋಕಗಳಿಗೂ ಆನಂದ ಉಂಟಾದ ಕಾಲದಲ್ಲಿ ಮಾರ (ಮನ್ಮಥ) ನಿಗೆ ಮಾತ್ರ ದುಃಖವು ಮತ್ತು ಭಯವೂ ಸಹಾ ಉಂಟಾಯಿತು. ಅಲ್ಲದೆ ಮುನಿಸಮೂಹವೆಲ್ಲಾ ಈ ಧರ್ಮಸ್ವರೂಪಕ್ಕೆ ಮಂದಾರಪುಷ್ಪಗಳಿಂದ ರ್ಚಿಸಿ ಲೋಕದ ಅಜ್ಞಾನವೆಲ್ಲಾ ನಾಶವಾಗಿ ಸತ್ಯವು ಅಭಿವೃದ್ಧಿಯಾಗುವುದೆಂದು ಪರಮಾನಂದಭರಿತರಾದರು. ಆ ಕಾಲದಲ್ಲಿ ಈ ವಾರ್ತೆಯಂ ಕೇಳಿಬಂದ ರಾಜನಾದ ಶುದ್ಧೋದನನು ಪುತ್ರಸಂತಾನಕ್ಕೆ ಸಂತೋಷವನ್ನು, ಅರಣ್ಯ ಜನನಕ್ಕೆ ವಿಷಾದವನ್ನು ಸಹಾ ತಾಳಿದನು.

ರಾಜಮಹಿಷಿಯಾದ ಮಾಯಾದೇವಿಯು ಸ್ತ್ರೀಸ್ವಭಾವಯುಕ್ತಳಾಗಿ ವೃಕ್ಷಮೂಲದ ಜನನಕ್ಕೆ ಖಿನ್ನ ಹೃದಯಳಾದಳು. ಆ ಕಾಲಕ್ಕೆ ಒಬ್ಬ ವೃದ್ಧ ಸ್ತ್ರೀಯು ಎಲ್ಲಿಂದಲೋ ಗೋಚರಿಸಿ ಆ ಶಿಶುವನ್ನು ಆಶೀರ್ವದಿಸಿದಳು.

## ಅಸೀತನ ಆಗಮನವು.

ಇಷ್ಟರಲ್ಲಿಯೇ ಒಂದು ಗುಹೆಯ ಅಂತರಂಗದಲ್ಲಿ ತಪವಂ ಗೈಯ್ಯುತ್ತಿದ್ದ "ಅಸೀತ" ನೆಂಬ ಬ್ರಹ್ಮಋಷಿಯನ್ನು ಶುದ್ಧೋದನನು ಬಹು ಮರ್ಯಾದೆಯಿಂದ ಕರತಂದನು. ಆ ಋಷಿಯು ಸದ್ವಂಶೋತ್ಪನ್ನನಾಗಿಯೂ, ಸಕಲಜ್ಞನಾಗಿಯೂ, ಜ್ಞಾನದಲ್ಲೂ, ವಿದ್ಯಾಕೌಶಲ್ಯದಲ್ಲೂ ಸಹಾ ಅದ್ವಿತೀಯನಾಗಿದ್ದನು. ಈ ಅಸೀತನು ಆ ಶಿಶುವನ್ನು ನೋಡಿದ ಒಡನೆಯೇ ಅಶ್ರುಮಿಶ್ರಕಟಾಕ್ಷನಾದನು. ಇದನ್ನು ನೋಡಿದ ಶುದ್ಧೋದನನು ತನ್ನ ಪುತ್ರನ ದರ್ಶನದಿಂದ ಈ ಋಷಿಯು ನಯನಾಂಬು ಭರಿತನಾದುದನ್ನು ನೋಡಿ ಚಿಂತೆಯಿಂದ ಕಾರಣವೇನೆಂದು ಋಷಿಯನ್ನು ಬೇಡಿದನು. ಅದಕ್ಕೆ ಆ ಋಷಿಯು ಎಲೈ ರಾಜನೇ, ಪೂರ್ಣಚಂದ್ರನನ್ನು ಆಲೋಕಿಸುವ ಸಮುದ್ರವು ಉಕ್ಕಿ ಜಲರಾಶಿಯನ್ನು ಭೂಮಿಯ ಕಡೆಗೆ ವರ್ಧಿಸುವಂತೆ ಈ ಬಾಲಕನ ಅವಲೋಕಾನಂದದಿಂದುಂಟಾದ ಆನಂದಬಾಷ್ಪಗಳೇ ಹೊರತು ಇವು ದುಃಖಾಶ್ರುಗಳಲ್ಲವೆಂದು ಹೇಳಿದ್ದಲ್ಲದೆ, ಪುನಃ ಈ ಬಾಲಕನನ್ನು, ಅವನ ಚಿನ್ಹೆಗಳನ್ನೂ ಸಹಾ ಚನ್ನಾಗಿ ಈಕ್ಷಿಸಿ, ನಾನು ಬ್ರಹ್ಮನನ್ನು ಪೂಜಿಸುವದಿಲ್ಲ. ಈ ಶಿಶುವನ್ನು ಪೂಜಿಸುತ್ತೇನೆ. ಸಕಲ ದೇವತೆಗಳೂ ಮತ್ತು ಲೋಕಪಾಲಕರೆಲ್ಲಾ ಈ ಸತ್ವದ ಕಣಿಯನ್ನು ಪೂಜಿಸುವದಕ್ಕಾಗಿ ತಮ್ಮ ಸ್ಥಾನಗಳನ್ನು ಬಿಡುತ್ತಾ ಇರುವರು. ಎಲೈ ರಾಜನೇ, ಅನುಮಾನವನ್ನೂ ಮತ್ತು ಚಿಂತೆಯನ್ನೂ ಸಹಾ ತ್ಯಜಿಸು. ಈ ಬಾಲಕನ ಜನನಕಾಲದ ವಿಶೇಷವನ್ನು ಪರ್ಯಾಲೋಚಿಸಿದಲ್ಲಿ, ಇವನ ದೆಸೆಯಿಂದ ಸಮಸ್ತ ಲೋಕಗಳಿಗೂ ಕ್ಷೇಮ ಉಂಟಾಗುವುದೆಂದು ಹೇಳಿದ್ದಲ್ಲದೆ, ಪುನಃ—ಎಲೈ ರಾಜನೇ, ನಿನ್ನ ಪುತ್ರನ ದರ್ಶನದಿಂದ ಮೊದಲು ಆನಂದಬಾಷ್ಪಗಳು ಉಂಟಾದವು. ಆದರೆ ಈಗ

ದುಃಖಾಶ್ರುಗಳು ತಲೆದೋರುವವು. ಏತಕ್ಕಂದರೆ :—ನಾನು ಈಗ ಕೇವಲ ವೃದ್ಧನಾಗಿ ಇರುತ್ತೇನೆ. ನಾನು ನೋಡಿದಂತೆ ನನ್ನ ಬಾಲ್ಯಾರಭ್ಯ ಇದುವರಿವಿಗೂ ಈ ಪ್ರಪಂಚವೆಲ್ಲಾ, ಅಜ್ಞಾನದಿಂದಲೂ, ವ್ಯಥೆಯಿಂದಲೂ ಸಹಾ, ಕ್ಷೀಣತೆಯನ್ನು ಹೊಂದಿರುವದು. ಈ ನ್ಯೂನತೆಗಳನ್ನು ನಿವಾರಣೆ ಮಾಡಿ ಪ್ರಪಂಚಕ್ಕೆಲ್ಲಾ ಸೌಖ್ಯವನ್ನು, ಶುದ್ಧಜ್ಞಾನದಿಂದ ನಿರ್ವಾಣಪದವಿಯನ್ನೂ ಸಹಾ "ಮಹಾಯಾನ" ನಾದ ಈ ಕುಮಾರನು ಉಂಟುಮಾಡುವುದನ್ನೂ, ಇದರಿಂದ ಲೋಕಕ್ಕೆ ಉಂಟಾಗುವ ಆನಂದವನ್ನೂ ಸಹಾ ಕಣ್ಣಿನಿಂದ ನೋಡಿ ಸಂತೋಷಪಡುವೆನೆಂದರೆ ಈಗ ನನಿಗೆ ಅಂತ್ಯಕಾಲವು ಸಂಭವಿಸುತ್ತಾ ಇರುವುದು. ಅಲ್ಲದೆ ಈ ಸಂತೋಷವು ನನಿಗೆ ಲಭಿಸದೆ, ಇದ್ದಾಗ್ಯೂ ಮುಂದೆ, ಈ ಶಿಶುವಿನ ಬೋಧೆಯು, ಭವಸಾಗರಮಗ್ನರಾದ ಸಂಸಾರಿಗಳೆಂಬ ಹಡಗುಗಳಿಗೆ ಜನನಮರಣಗಳೆಂಬ ಮಾರುತ ಘಾತದಿಂದುಂಟಾದ ಆಯಾಸವನ್ನು ನಿವಾರಣೆ ಮಾಡುವ ಸಮುದ್ರದ ರೇವಿನ ಸ್ಥಳವಾಗಿರುವುದು. ಮತ್ತು ಇವನ ತಪೋಶಕ್ತಿಯು ನಿರ್ಮಲವಾಗಿಯೂ, ಶೀತಳವಾಗಿಯೂ, ಇರುವ ಸರೋವರದಂತೆ ಆಪ್ಯಾಯನಕರವಾಗಿರುವದು. ಸಂಸಾರಾಗ್ನಿಯಿಂದ ತಪ್ತರಾದವರು ಈ ಸರೋವರದ ಅಮೃತಾಂಬುಪಾನದಿಂದ ತಮ್ಮ ದಾರುಣವನ್ನು ಕಳೆದುಕೊಳ್ಳುವರು. ಈ ಬಾಲಕನು ಜನಗಳ ಬಂಧ ವಿಮೋಚನೆಗಾಗಿಯೇ ಅವತರಿಸಿರುವನು. ಈತನು ಅಜ್ಞಾನವೆಂಬ ಮಂಜಿನಲ್ಲಿ ಸಿಲುಕಿ ಅಚೇತನರಾಗಿ ಇರುಮನುಜರನ್ನೆಲ್ಲಾ ಜ್ಞಾನಸಾಟದಿಂದ ಮೇಲಕ್ಕೆ ಎತ್ತಿ ನಿಲ್ಲಿಸುವನು. ಮತ್ತು ಈತನಿಂದ ಅನ್ಯಾಯವೆಂಬ ಕ್ಷಾಮವು ನಾಶವಾಗಿ ನ್ಯಾಯವೃಷ್ಟಿಯು ವರ್ಷಿಸುವುದು. ಈತನು ಅನಾಥರನ್ನೂ, ದರಿದ್ರರನ್ನೂ, ಸಹಾಯ ಶೂನ್ಯರನ್ನೂ, ಅಜ್ಞಾನಿಗಳನ್ನೂ ಸಹಾ ಕಾಪಾಡಲು ಜನಿಸಿರುವನು, ಎಂದು ಈ ರೀತಿಯಾಗಿ ಹೇಳಿದ್ದಲ್ಲದೆ ಈ ಶಿಶುವಿಗೆ "ಸಿದ್ಧಾರ್ಥ"ನೆಂಬ ನಾಮವು ಒಪ್ಪುವುದೆಂದು ಹೇಳಿ ಅಂತರ್ಧಾನನಾದ ಋಷಿಯ ಆಜ್ಞೆಯಂತೆಯೇ ಸಿದ್ಧಾರ್ಥನೆಂದು ನಾಮಕರಣಂಗೈದು ಪರಮಾನಂದದೊಡನೆ ದಂಪತಿಗಳೀರ್ವರೂ ನಗರಪ್ರವೇಶವನ್ನು ಮಾಡಿದರು.

## ಮಾಯಾದೇವಿಯು ಪರಲೋಕವನ್ನೈದಿದ್ದು.

ಅನಂತರ ಮಾಯಾದೇವಿಯು ಉದ್ಯಾನವನದಲ್ಲಿ ಋಷಿಯು ತನ್ನ ಪುತ್ರನ ವಿಷಯವಾಗಿ ಹೇಳಿದ ಮಾತುಗಳನ್ನು ನೆನಪಿಗೆ ತಂದು ಕೊಂಡು, ತಾನು ಇನ್ನೂ ಕೆಲವು ಕಾಲ ಜೀವಿಸಿದ್ದಲ್ಲಿ ಪತಿಸಂಪರ್ಕದಿಂದ ಇನ್ನೂ ಅನೇಕ ಮಕ್ಕಳು ಜನಿಸಬಹುದು. ಒಂದುವೇಳೆ ಅವರು ದುರ್ಮಾರ್ಗಿಗಳಾಗ ಬಹುದು. ಅದರಿಂದ ನನಗೆ ದುಃಖವೂ ಸಹಾ ಉಂಟಾಗುವದಲ್ಲದೆ ನನ್ನ ಪತಿವಂಶಕ್ಕೆ ಅಪಕೀರ್ತಿ ಸಂಭವಿಸಿದರೂ ಸಂಭವಿಸ ಬಹುದು. ಆದಕಾರಣ ಅನೇಕ ನಕ್ಷತ್ರಗಳಿಗಿಂತ ಒಬ್ಬ ಚಂದ್ರನಿಂದಲೇ ಲೋಕವು ಪ್ರಕಾಶಮಾನವಾಗುವಂತೆ ಲೋಕದೀಪನಾದ ಈ ಕುಮಾರನೊಬ್ಬನೇ ಸಾಕು. ಆದಕಾರಣ ಈ ಲೋಕವನ್ನು ತ್ವರ್ಯದಲ್ಲಿಯೇ ಮರಣವ್ಯಾಜದಿಂದ ಬಿಡುವೆನೆಂಬದಾಗಿ ಯೋಚಿಸಿದಳೋ ಎನ್ನುವಂತೆ ಆ ಕಾಲಕ್ಕೆ ಸರಿಯಾಗಿ ರೋಗವು ಪ್ರಾಪ್ತವಾಯಿತು. ಮಾಯಾದೇವಿಯು ತನ್ನ ಕೋರಿಕೆಯನ್ನು ನೆರವೇರಿಸುವದಕ್ಕೆ ಇದೇ ಸಕಾಲವೆಂದು ಭಾವಿಸಿದಳೋ ಎನ್ನುವದಕ್ಕೆ ಸರಿಯಾಗಿ ಮರಣಕಾಲವು ಪ್ರಾಪ್ತವಾಗಲು, ತನ್ನ ಸಹೋದರಿ (ಸವತಿ) ಯಾದ ಪ್ರಜಾವತಿಯನ್ನು ಕರೆಯಿಸಿ ಆಕೆಯನ್ನು ಕುರಿತು, ಎಲೈ ಸಹೋದರಿಯೇ ! ಈ ಪುತ್ರನ ತಾಯಿಯಾದ ನಾನು ಇನ್ಯಾವ ಬಾಲಕರಿಗೂ ಮಾತೆಯನ್ನಿಸಿಕೊಳ್ಳುವದಿಲ್ಲಾ. ನಾನು ಈ ಲೋಕವನ್ನು ತ್ವರ್ಯದಲ್ಲಿ ಬಿಡುತ್ತೇನೆಂದು ಹೇಳಿ, ಆ ಬಾಲರತ್ನವನ್ನು ಆಕೆಯ ಕೈಗೆ ಒಪ್ಪಿಸಿ, ಎಲೈ ಮಾತೆಯೇ, ನಾನು ಪತಿಯಾದ ಶುದ್ಧೋದನನನ್ನು ಪುತ್ರನಾದ ಸಿದ್ಧಾರ್ಥನನ್ನೂ ಸಹಾ ಬಿಟ್ಟು ಪರಲೋಕಕ್ಕೆ ತೆರಳುವೆನು. ನೀನು ಈ ಬಾಲಕನಿಗೆ ಜನನಿಯಾಗಿಯೂ ಶುದ್ಧೋದನನಿಗೆ ಪಟ್ಟಮಹಿಷಿಯಾಗಿಯೂ ಸಹಾ ಆಗಿ, ಈ ಬಾಲಕನನ್ನು ಕಾಪಾಡಿಕೊಂಡು ಬಾ, ಎಂಬದಾಗಿ ಹೇಳಿ, ಅವಳಿಂದ ಅದೇ ರೀತಿಯಲ್ಲಿ ವಾಗ್ದಾನವನ್ನು ಪಡೆದು, ಪತಿಗೆ ವಂದನೆಯನ್ನು ಮಾಡಿ, ಶಿಶುವನ್ನು ಅಶ್ರುಮಿಶ್ರ ಕಟಾಕ್ಷದಿಂದೀಕ್ಷಿಸಿ, ಭಗವಂತನನ್ನು ಸ್ಮರಿಸುತ್ತಾ ಈ ಲೋಕದಿಂದ ನಿವೃತ್ತಳಾದಳು. ಅನಂತರ ಈ ತಾಯಿ

ಯಿಲ್ಲದ ಶಿಶುವನ್ನು ಪ್ರಜಾವತಿಯೂ ಮತ್ತು ಶುದ್ಧೋದನನೂ ಸಹಾ ಬಹು ಪ್ರೇಮದಿಂದ ಸಾಕುತ್ತಾ ಬರಲು, ಈ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಶಕ್ತಿಯಲ್ಲೂ, ಬುದ್ಧಿಯಲ್ಲೂ ಸಹಾ ವರ್ಧಿಸುತ್ತಾ ಬಂದನು.

## ಬುದ್ಧನ ವಿವಾಹ ಮತ್ತು ಸಂತ್ರಾನ.

ಈ ರೀತಿಯಾಗಿ ಯೌವ್ವನ ಶಾಲಿಯಾದ ಪುತ್ರನನ್ನು ನೋಡಿ ಶುದ್ಧೋದನನು ಈತನಿಗೆ ವಿವಾಹವನ್ನು ನೆರವೇರಿಸಬೇಕೆಂಬ ಕುತೂಹಲದಿಂದ ಅನೇಕ ರಾಜರಿಗೆ ಕನ್ಯಾರ್ಥವಾಗಿ ಹೇಳಿ ಕಳುಹಿಸಿ, ಅನೇಕ ರಾಜ ಕನ್ಯೆಯರನ್ನು ಬರಮಾಡಿಸಿದನು. ಆ ಕನ್ಯೆಯರ ಮಾತಾಪಿತೃಗಳು ಈ ಕೋಮಲನಾದ ಬಾಲಕನನ್ನು ನೋಡಿ, ಈತನು ಇನ್ನೂ ಬಾಲ್ಯವಯಸ್ಕನು, ಶೌರ್ಯಾದಿ ಗುಣಗಳು ಕಾಣಬರುವದಿಲ್ಲಾ, ಶುದ್ಧ ಮಂಕುಹಿಡಿದವನಂತೆ ತೋರುತ್ತಾನೆ, ಆದಪ್ರಯುಕ್ತ ನಮ್ಮ ಕನ್ಯೆಯರನ್ನು ಆಳತಕ್ಕ ಶಕ್ತಿಯೂ, ಮತ್ತು ಶತೃಗಳನ್ನು ಜಯಿಸತಕ್ಕ ಸಾಹಸವೂ ಇಲ್ಲದಂತೆ ತೋರುತ್ತಾನೆಂದು ಹೇಳಲು ಶುದ್ಧೋದನನು ಖಿನ್ನಮುಖನಾಗಿ ಈ ವಾರ್ತೆಯನ್ನು ತನ್ನ ಪ್ರಿಯ ಪುತ್ರನಿಗೆ ತಿಳುಹಿಸಲು, ಸಿದ್ಧಾರ್ಥನು ಕೋಪಗೊಳ್ಳದೆ ನಸುನಕ್ಕು, ಯಾವ ಮಾತನ್ನೂ ಸಹಾ ಆಡದೆ ಉದ್ಯಾನವನಕ್ಕೆ ತೆರಳಿ, ಅಲ್ಲಿ ಒಂದು ಉನ್ನತವಾದ ಜಂಬೂವೃಕ್ಷದ ನೆಳಲಿನಲ್ಲಿ ಕುಳಿತು, ಈ ಪ್ರಪಂಚ ವಿಷಯಗಳನ್ನು ಕುರಿತು ಯೋಚಿಸುತ್ತಾ ಹಾಗೆಯೇ ಯೋಗಾರೂಢನಾದನು. ಹೀಗೆಯೇ ಕೆಲವು ಕಾಲ ಬ್ರಹ್ಮಚರ್ಯವನ್ನಾಚರಿಸುತ್ತಾ ಗುರುಮುಖೇನ ವಿದ್ಯವನ್ನು ಅಧಿಕರಿಸಿ ಸಕಲ ಕಲೆಗಳಿಂದ ಕೂಡಿದ ತೇಜಸ್ಸಿನಿಂದ ಪ್ರಕಾಶಿಸಿದನು. ಅನಂತರ ಇವನ ತಂದೆಯಾದ ಶುದ್ಧೋದನನು ಪುನಹಾ ಅನೇಕ ರಾಜಪುತ್ರಿಯರನ್ನು ಕರೆಯಿಸಿ ಆ ಕನ್ಯೆಯರ ಮಾತಾಪಿತೃಗಳು ಕೇಳಿದ ವಿದ್ಯಗಳಲ್ಲೆಲ್ಲಾ ಇವನಿಂದ ಪರೀಕ್ಷೆಯನ್ನು ಕೊಡಿಸಿದನು. ಅಲ್ಲಿದ್ದ ರಾಜಕನ್ಯೆಯರೆಲ್ಲಾ ಈ ರಾಜಪುತ್ರನ ತೇಜಸ್ಸನ್ನು ನೋಡಲಾರದೆ ಕಣ್ಣುಗಳನ್ನು ಮುಚ್ಚಿಕೊಂ

ಡರು. ಅವರೊಳಗೆ ಸ್ವಲ್ಪವೂ ಹೆದರದೆ ಇವನನ್ನೇ ನೋಡುತ್ತಿದ್ದ ಈತನ ಸೋದರ ಮಾವ ಕಾಳಿರಾಜನ ಸೀಮಂತಪುತ್ರಿಯಾದ, ಮತ್ತು ಸರ್ವಾಂಗ ಸುಂದರಿಯಾದ "ಎಶೋದರಾ" ಯೆಂಬ ಕನ್ಯೆಯನ್ನು ತಾನಾಗಿಯೇ ವರಿಸಿ ಪಾಣಿಗ್ರಹಣವನ್ನು ಮಾಡಿದನು. ಅನಂತರ ಇವರ ವಿವಾಹವು ಅತಿ ಸಂಭ್ರಮದೊಡನೆ ನೆರವೇರಲ್ಪಟ್ಟಿತು. ಹೀಗೆಯೇ ಕೆಲವು ದಿವಸಗಳಾದ ನಂತರ ಈ ದಂಪತಿಗಳಿಗೆ "ರಾಹುಲ" ನೆಂಬ ಪುತ್ರನು ಜನಿಸಿದನು. ಇದನ್ನು ಕಂಡ ಶುದ್ಧೋದನನು ತನಿಗೆ ಪೌತ್ರನು ಜನಿಸಿದ್ದಕ್ಕಾಗಿ ಸಂತೋಷಪಟ್ಟು ತಾನು ತನ್ನ ಮಗನನ್ನು ಪ್ರೀತಿಸುತ್ತಿದ್ದಂತೆ, ತನ್ನ ಮಗನೂ ಅವನ ಶಿಶುವನ್ನು ಪ್ರೀತಿಯಿಂದ ಸಂರಕ್ಷಣೆಮಾಡುತ್ತಾನೆಂಬದಾಗಿಯೂ, ತನ್ನ ಮಗನಿಗೆ ಸಂತಾನವಾದ ಪ್ರಯುಕ್ತ, ತನ್ನ ಸಂತತಿಯವರಿಗೇ ರಾಜ್ಯವು ಸಿಲ್ಲುವದೆಂಬದಾಗಿಯೂ ಸಹಾ ಯೋಚಿಸಿ ಅತ್ಯಂತ ಹರ್ಷಯುಕ್ತನಾದದ್ದಲ್ಲದೆ, ಈ ಬಾಲ ದಂಪತಿಗಳು ವಾಸಮಾಡುವದಕ್ಕೆ ಪ್ರತ್ಯೇಕವಾಗಿ ಒಂದು ದಿವ್ಯವಾದ ಅರಮನೆಯನ್ನು ನಿರ್ಮಿಸಿ, ಪ್ರಪಂಚದ ಭೋಗವಸ್ತುಗಳನ್ನೆಲ್ಲಾ ಒದಗಿಸಿ, ತನ್ನ ಮಗನಿಗೆ ವ್ಯಸನ, ದುಃಖಾದಿಗಳು ಸ್ವಪ್ನದಲ್ಲೂ ಕಾಣದಂತೆ ಸೌಖ್ಯಸಾಗರದಲ್ಲಿ ಮುಳುಗಿಸಿದ್ದನು. ಇದರಂತೆಯೇ ಸಿದ್ಧಾರ್ಥನು ಯಾವ ವ್ಯಸನವನ್ನೂ ಕಂಡವನಾಗಿ ಇರಲಿಲ್ಲಾ.

## ಬುದ್ಧನಿಗೆ ಪ್ರಪಂಚದಿಂದ ಉಂಟಾದ ಭೀತಿಗಳು.

ಹೀಗೆಯೇ ಸಿದ್ಧಾರ್ಥನು ಕೆಲವು ಕಾಲ ಸುಖಪರಂಪರೆಗಳಲ್ಲಿಯೇ ಆನಂದಪಡುತ್ತಾ ಇದ್ದು, ಮದ್ಯಾನ್ಹೆಯು ಕಾಡಿಗೆ ಅತಿಕ್ರಮಿಸುವಂತೆ ತನ್ನ ರಾಜ್ಯವನ್ನು ನೋಡಬೇಕೆಂಬ ಕುತೂಹಲ ಉಂಟಾಗಿ ತನ್ನ ಮನೋಗತವನ್ನು ತನ್ನ ತಂದೆಗೆ ತಿಳುಹಿಸಿದನು. ಅದರಂತೆಯೇ ಇವನ ತಂದೆಯು ದೇಶಸಂಚಾರಕ್ಕೆ ತಕ್ಕ ಅಸಂಖ್ಯಾತಸಾಮಗ್ರಿಗಳ ಸಮೇತ ಒಂದು ದಿವ್ಯರತ್ನಖಚಿತವಾದ ರಥದಲ್ಲಿ ತನ್ನ ಪ್ರಿಯಪುತ್ರನನ್ನು ಕುಳ್ಳಿರಿಸಿ "ಚನ್ನ" ನೆಂಬ ಸಾರಥಿಯನ್ನು ನೇಮಿಸಿ, ಚತುರಂಗಬಲಸಹಿತವಾದ ಅಂಗರಕ್ಷಕರೊಡನೆ ರಾಜ್ಯಸಂಚಾರಕ್ಕೆ ಕಳುಹಿಸಿದು

ದಲ್ಲದೆ, ತನ್ನ ಮಗನು ಹೋಗುವ ದಾರಿಯಲ್ಲಿ ವ್ಯಸನವನ್ನುಂಟುಮಾ
ಡುವ ಯಾವ ವಸ್ತುವೂ ಗೋಚರಿಸದಂತೆ, ಎಲ್ಲೆಲ್ಲಿ ನೋಡಿದಾಗ್ಯೂ
ನೇತ್ರಾನಂದಕರವಾದ ವಸ್ತುಗಳೇ ಗೋಚರಿಸುವಂತೆ ಮಾಡಿದ್ದನು.
ಅನಂತರ ಸಾರಥಿಸಹಿತನಾದ ರಾಜಪುತ್ರನು ಕೆಲವು ದೂರ ಪ್ರಯಾಣ
ವನ್ನು ಬೆಳೆಯಿಸಿ ಮನೋಹರವಾದ ಒಂದು ದಿವ್ಯೋದ್ಯಾನದ ಸಮೀಪ
ಕ್ಕೆ ಬರುವ ದಾರಿಯಲ್ಲಿ ಅಕಸ್ಮಾತ್ತಾಗಿ, ಬೆನ್ನು ಬಗ್ಗಿದವನಾಗಿಯೂ,
ಶ್ವೇತಕೇಶನಾಗಿಯೂ, ಪಾತಾಳಗತವಾದ ನೇತ್ರವುಳ್ಳವನಾಗಿಯೂ,
ಸುಕ್ಕುಸುಕ್ಕಾದ ಚರ್ಮ ಉಳ್ಳವನಾಗಿಯೂ ಅಂಗಗಳೆಲ್ಲಾ ಕೃಶವಾ
ಗಿಯೂ ಸಹಾ ಇರುವ ಒಬ್ಬ ವೃದ್ಧನನ್ನು ಕಂಡು, ಈ ಮನುಷ್ಯನು
ಈ ರೀತಿಯಲ್ಲಿ ಇರುವುದಕ್ಕೆ ಕಾರಣವೇನೆಂದು ಸಾರಥಿಯಾದ ಚನ್ನ
ನನ್ನು ಕೇಳಲು, ಅದಕ್ಕೆ ಅವನು ಸ್ವಲ್ಪವೂ ಮರೆಮಾಚದೆ, ಈ
ಮನುಷ್ಯನು ಎಲ್ಲರಂತೆಯೇ ಬಾಲ್ಯಾವಸ್ಥೆಯನ್ನೂ, ಮತ್ತು ಒಳ್ಳೇ
ರೂಪವುಳ್ಳ ಯೌವ್ವನಾವಸ್ಥೆಯನ್ನೂ ಸಹಾ ಅನುಭವಿಸಿ, ಅವಸಾನವ
ನ್ನು ನಿರೀಕ್ಷಿಸುವ ವೃದ್ಧಾವಸ್ಥೆಗೆ ಬಂದು, ತನ್ನ ರೂಪ, ಯೌವ್ವನ,
ಸಂತೋಷ ಮುಂತಾದ್ದನೆಲ್ಲಾ ಕಳೆದುಕೊಂಡು ಈಗ ಈ ಅವ
ಸ್ಥೆಗೆ ಬಂದಿರುವನೆಂದು ಹೇಳಲು, ಈ ಮಾತನ್ನು ಕೇಳಿದ
ರಾಜಪುತ್ರನು ಯಾವ ದುಃಖವನ್ನೂ ಮತ್ತು ಪ್ರಪಂಚಾನುಭ
ವವನ್ನೂ ಸಹಾ ಅರಿಯದವನಾದ್ದರಿಂದ ತುಂಬಾ ವ್ಯಾಕುಲ ಉಂಟಾಗಿ,
ರೂಪು, ಯೌವನ, ಸಾಮರ್ಥ್ಯ ಮುಂತಾದವುಗಳ್ಯಾವದೂ ಮನು
ಷ್ಯನಿಗೆ ಶಾಶ್ವಿತವಲ್ಲವೆಂದು ತಿಳಿದು ಖಿನ್ನಮುಖನಾದನು. ಅನಂ
ತರ ಇನ್ನು ಸ್ವಲ್ಪ ಮುಂದಕ್ಕೆ ಬರಲು ಎದುರಿಗೆ ದಾರಿಯಲ್ಲಿ
ರೋಗಪೀಡಿತನಾದ ಒಬ್ಬ ಮನುಷ್ಯನನ್ನು ಕಂಡು ಸಾರಥಿಯಿಂದ
ಅವನ ವಿಷಯವನ್ನು ತಿಳಿದು, ಸೌಖ್ಯದಿಂದ ಕಾಪಾಡತಕ್ಕ ದೇಹವು
ರೋಗವು ಪ್ರಾಪ್ತವಾದಲ್ಲಿ ಈ ಅವಸ್ಥೆಗೆ ಬರುವುದೇ, ಎಂಬದಾಗಿ
ವಿಷಾದದಿಂದ ತನಲ್ಲಿ ತಾನೇ ಮಾತನಾಡಿಕೊಂಡನು. ಈ ರಾಜಕುಮಾ
ರನ ವಿಷಾದವನ್ನು, ಮತ್ತು ಖಿನ್ನತೆಯನ್ನೂ ಸಹಾ ಸಾರಥಿಯು
ಕಂಡು, ಈ ಮಾರ್ಗದಲ್ಲಿಯೇ ಅತಿಕ್ರಮಿಸಿ ನಡೆದಲ್ಲಿ ರಾಜಪುತ್ರ

ಸಿಗೆ ಇನ್ನೂ ಅನೇಕ ದುಃಖಕ್ಕೆ ಕಾರಣವಾಗುವುದೆಂದು ತಿಳಿದು, ಇನ್ನೊಂದು ಮಾರ್ಗವಾಗಿ ರಥವನ್ನು ತಿರುಗಿಸಿದನು. ಆ ಸಮಯಕ್ಕೆ ಸರಿಯಾಗಿ, ನಾಲ್ಕು ಜನರು ಒಂದು ಶವವನ್ನು ಹೊತ್ತುಕೊಂಡು ಅದೇ ಮಾರ್ಗವಾಗಿ ಬರಲು, ರಾಜಪುತ್ರನು ಎಂದಿನಂತೆಯೇ ಸಾರಥಿಯನ್ನು ಕುರಿತು ಈ ಮನುಷ್ಯನನ್ನು ಈ ರೀತಿ ಯಾತಕ್ಕೆ ಹೊತ್ತುಕೊಂಡು ಹೋಗುವರು ? ಎಂದು ಕೇಳಲು ಸಾರಥಿಯು, ಈ ಮನುಷ್ಯನು ಸತ್ತಿರುವನು, ಇವನ ದೇಹವು ನಿರ್ಜೀವವಾಗಿರುವದೆಂದು ಹೇಳಲು, ರಾಜಪುತ್ರನು ಪುನಃ ಸಾರಥಿಯನ್ನು ಕುರಿತು, ಇದೇನು ಇವನಿಗೆ ಮಾತ್ರ ಈ ವಿಧಿಯೇ ? ಅಥವಾ, ಇನ್ನ್ಯಾರಿಗಾದರೂ ಈ ವಿಧಿಯುಂಟೊ ? ಎಂಬದಾಗಿ ಕೇಳಲು ಸಾರಥಿಯು, ಪ್ರತಿ ಒಬ್ಬ ಮನುಷ್ಯನೂ ಇದೇ ರೀತಿಯಲ್ಲಿ ಯಾವಾಗಲಾದರೂ ಸಾಯಲೇಬೇಕು. ಅನಂತರ ಇವನ ದೇಹವನ್ನು ಸುಟ್ಟು ಬೂದಿಯನ್ನಾಗಿ ಮಾಡುತ್ತಾರೆಂದು ಹೇಳಲು, ರಾಜಪುತ್ರನು ನಾನೂ ಇದೇ ರೀತಿಯಲ್ಲಿ ಸಾಯಬೇಕೇ ? ನನ್ನನ್ನೂ ಸುಡುತ್ತಾರೆಯೇ ? ಎಂದು ಕೇಳಲು, ಸಾರಥಿಯು, ಸುಮ್ಮನೇ ಇರಲು ಪುನಃ ಬಲಾತ್ಕರಿಸಲು, ಚನ್ನನು ಎಲೈ ರಾಜಪುತ್ರನೇ ನಿನಗೂ ಇದೇ ವಿಧಿಯೇ ಸಂಭವಿಸುವುದೆಂದು ಹೇಳಿದನು. ಈ ಮಾತನ್ನು ಕೇಳಿ ಸಿದ್ಧಾರ್ಥನು, ಭಯದಿಂದಲೂ, ಶೋಕದಿಂದಲೂ ಸಹಾ ಕೂಡಿ ತನ್ನಲ್ಲಿಯೇ ಚನ್ನಾಗಿ ಯೋಚಿಸಿ, ಅಯ್ಯೋ ಮನುಷ್ಯನೇ ! ನೀನು ಇಷ್ಟು ಆದರದಿಂದ ಕಾಪಾಡತಕ್ಕ ದೇಹವು ಗತಜೀವತ್ವವನ್ನು ಹೊಂದಿ ಅನಂತರ ಮಣ್ಣು ಪಾಲಾಗುವುದೇ ? ಆದರೂ ನೀನು ದೇಹವನ್ನು ಶಾಶ್ವತವೆಂದು ಭಾವಿಸಿ ಪೋಷಿಸುವೆಯಾ ? ಅಯ್ಯೋ ! ಭ್ರಾಂತನಾದ ಮಾನವನೇ, ಎಂದು ನಿಟ್ಟುಸುರು ಬಿಡುವ ರಾಜಪುತ್ರನ ವಿಷಾದಕ್ಕೂ ಮತ್ತು ಇವನಿಗೆ ಉಂಟಾದ ಜ್ಞಾನಕ್ಕೂ ಸಹಾ ಆಶ್ಚರ್ಯಪಟ್ಟು ರಥವನ್ನು ಪಟ್ಟಣದ ಕಡೆಗೆ ತಿರುಗಿಸಿ ಅರಮನೆಯ ಒಳಗೆ ತಂದನು. ಆಗ ರಾಜಮರ್ಯಾದಾನುಸಾರವಾಗಿ ರಾಜಪುತ್ರಿಯಾದ "ಕೃಷ್ಣ ಗೌತಮಿ" ಎಂಬ ಕನ್ಯೆಯು ಆರತಿಯನ್ನು ಬೆಳಗಿದನಂತರ, ಈ ರಾಜಪುತ್ರನ ಭಾವದಿಂದ ಕಂಡುಬರುವ ತೇಜಸ್ಸಿಗೂ, ಇವನಿಗೆ

ಉಂಟಾಗಿರುವ ಯೋಚನಾಶಕ್ತಿಗೂ, ದೃಢವಾದ ಚಿತ್ತಕ್ಕೂ ಸಹಾ, ಆಶ್ಚರ್ಯಪಟ್ಟು ರಾಜಪುತ್ರನನ್ನು ಕುರಿತು—ನಿನ್ನನ್ನು ಪಡೆದ ತಂದೆ ತಾಯಿಗಳು ಈ ದಿನ ನಿನ್ನನ್ನು ನೋಡಿ ಆನಂದಿಸಲಿ, ಮತ್ತು ನಿನ್ನನ್ನು ನಿನ್ನ ಪತ್ನಿಯು ಗಂಡನೆಂದು ಭಾವಿಸಲಿ ಎಂಬದಾಗಿ ಹರಸಿದಳು. ಇದನ್ನು ಕೇಳಿದ ರಾಜಪುತ್ರನು, ಆ ಕನ್ಯೆಯನ್ನು ಕುರಿತು—ನನ್ನನ್ನು ನೋಡಿ ಆನಂದಿಸುವದಕ್ಕೆ ಬದಲಾಗಿ, ಪ್ರಪಂಚ ಬಂಧನವನ್ನು ತಪ್ಪಿಸಿಕೊಂಡಿರುವವರೇ ಸುಖಿಗಳು. ಅವರನ್ನು ನೋಡಿ ಆನಂದಿಸಲಿ ಎಂದು ಹೇಳಿ, ಆಕೆಯ ಸೂಕ್ಷ್ಮ ಬುದ್ಧಿಗೆ ಮೆಚ್ಚಿ ತನ್ನ ರತ್ನಹಾರವನ್ನು ಆಕೆಗೆ ಕೊಟ್ಟು ಅರಮನೆಗೆ ಪ್ರವೇಶ ಮಾಡಿದನು. ಇವನು ಅರಮನೆಗೆ ಪ್ರವೇಶ ಮಾಡುತ್ತಲೇ "ಯಶೋಧರೆ"ಯು ಪತಿಯನ್ನು ಆದರದಿಂದ ಸತ್ಕರಿಸಿ ಇವನಿಗೆ ಉಂಟಾಗಿರುವ ವ್ಯಸನಕ್ಕೆ ಕಾರಣವನ್ನು ಕೇಳಿದಳು. ಅದಕ್ಕೆ ಸಿದ್ಧಾರ್ಥಕನು ಎಲೈ ಕಾಂತೆಯೇ, ಈ ಪ್ರಪಂಚದ ಜನರು ಕ್ಷಣೇ ಕ್ಷಣೇ ವಿಕಾರ (ಬದಲಾಯಿಸುವುದು) ಹೊಂದುತ್ತಾ ಇರುವರು, ಆದಕಾರಣ ನನ್ನ ಮನಸ್ಸು ಆಶ್ಚರ್ಯಯುಕ್ತವಾಗಿ ಇರುವುದು. ಮತ್ತು ಲೋಕದಲ್ಲಿ ಮನುಷ್ಯರು ಹುಟ್ಟುವರು, ಬೆಳೆಯುವರು, ವ್ಯಾಧಿಯಿಂದ ಪೀಡಿತರಾಗುವರು, ವಾರ್ಧಿಕ್ಯವನ್ನು ಅನುಭವಿಸುವರು, ಕೊನೆಗೆ ಸಾಯುವರು. ಅಯ್ಯೋ! ಈ ಲೋಕದಲ್ಲಿ ಯಾವದೂ ಶಾಶ್ವತವಲ್ಲವೆಂಬದಾಗಿ ನಿಟ್ಟುಸುರುಬಿಟ್ಟನು. ಈ ರೀತಿ ರಾಜಪುತ್ರನಿಗೆ ಉಂಟಾಗಿ ಇರುವ ವ್ಯಸನವನ್ನು ಇವನ ತಂದೆಯು ತಿಳಿದು ಖಡ್ಗಪ್ರಹರದಿಂದ ಛೇದಿಸಲ್ಪಟ್ಟ ಹೃದಯನಾಗಿ, ತನ್ನ ಪ್ರಿಯ ಪುತ್ರನ ಮನಸ್ಸನ್ನು ಸಂತೋಷಪಡಿಸುವ ಉದ್ದಿಶ್ಯ ನರ್ತನ, ಗಾಯನ, ಮುಂತಾದ ಚಿತ್ತಾಕರ್ಷಣ ಮಾಡತಕ್ಕ ಪ್ರಪಂಚಭೋಗಗಳನ್ನು ಹೆಚ್ಚಿಸುತ್ತಾ ಬಂದನು.

## ಬುದ್ಧನ ವೈರಾಗ್ಯ

ಆ ಕಾಲಕ್ಕೆ ಸರಿಯಾಗಿ ಸೂರ್ಯನು ವಿಶ್ರಾಂತಿಯನ್ನು ಹೊಂದಿದನು. ರಾಜಪುತ್ರನು ಚಿಂತೆಯಿಂದ ತನ್ನ ಏಕಾಂತ ಮಂದಿರವನ್ನು

ಶೇರಿದನು. ಇವನಿಗೆ ಶಯ್ಯಾಗೃಹದ ಹಂಸತೂಲಿಕಾತಲ್ಪದ ಶಯನವು ಅಸಹ್ಯಕರವಾಗಿದ್ದಿತು. ರಾಜಪುತ್ರನಿಗೆ ಆ ಸ್ಥಳವು ಕಾರಾಗಾರ (ಬಂದೀಖಾನೆ) ದಂತೆ ಕಾಣಬರಲು ಅಲ್ಲಿಂದ ತೆರಳಿ ಆ ನಿಶಿಯಲ್ಲಿಯೇ ಉದ್ಯಾನವನವನ್ನು ಶೇರಿದನು. ಅನಂತರ ಉದ್ಯಾನದ ಒಂದು ಮನೋಹರವಾದ ಜಂಬೂವೃಕ್ಷದ ಅಡಿಭಾಗದಲ್ಲಿ ಏಕಾಂಗಿಯಾಗಿ ಕುಳಿತು, ಅಯ್ಯೋ! ಈ ಪ್ರಂಚವೆಲ್ಲಾ ಅಂಧಕಾರಮಯವಾಗಿಯೂ, ಅಜ್ಞಾನ ಮಗ್ನವಾದದ್ದಾಗಿಯೂ ಸಹಾ ಕಾಣುವದಲ್ಲಾ! ಈ ಜನ್ಮದುಃಖವನ್ನು ನಿವಾರಣೆ ಮಾಡತಕ್ಕವರು ಯಾರೂ ಇಲ್ಲವೇ? ಎಂಬದಾಗಿ ಬಹು ಸಂಕಟದಿಂದಲೂ, ಪಶ್ಚಾತ್ತಾಪದಿಂದಲೂ ಸಹಾ ಮರುಗಿದನು. ಮತ್ತು ಇವನ ಮನಸ್ಸು ಜನನ ಮರಣ ವಿಷಯವನ್ನು ಮತ್ತು ನಾಶ ಹೇತುವಾದ ದುಷ್ಕೃತ್ಯಗಳ ವಿಷಯವನ್ನೂ ಸಹಾ ಯೋಚಿಸಲು ಅಂಕುರಿಸಿತು. ಈ ರೀತಿಯಲ್ಲೇ ವಿಷಾದಾಧಿಕ್ಯದಿಂದ ಚಿಂತಿಸುತ್ತಾ ಪ್ರಪಂಚದ ಯಾತನೆಗಳನ್ನೂ, ಮನುಷ್ಯ ದೇಹಕ್ಕೆ ನಿಶ್ಚೈಸಲ್ಪಟ್ಟಿರುವ ಮರಣವನ್ನೂ ಇದನ್ನು ತಿಳಿದಿದ್ದಾಗ್ಯೂ ಮಾನವನು ಎಚ್ಚರಗೊಳ್ಳದೆ ಇರುವದನ್ನೂ ಸತ್ಯತೆಯು ಮುಳುಗಿ ಹೋಗಿರುವುದನ್ನೂ ಸಹಾ ಕುರಿತು ಚಿಂತಿಸಿ ಪ್ರಲಾಪಿಸಿದನು. ಈ ರೀತಿಯಾಗಿ ಜಂಬೂವೃಕ್ಷದಡಿಯಲ್ಲಿ ಕುಳಿತು ಜ್ಞಾನದೃಷ್ಟಿಯಿಂದ (ಅಂದರೆ ಇಂದ್ರಿಯ ಮನಸಾದ್ಯನ್ತಃಕರಣಗಳೆಲ್ಲವನ್ನೂ ಒಂದು ಮಾಡಿ ಚಂಚಲವಿಲ್ಲದೆ ಯೋಚಿಸುವುದು) ಪ್ರಪಂಚವನ್ನು ಕುರಿತು ಧೃಢವಾಗಿ ಯೋಚಿಸುತ್ತಾ ಇರುವ ಸಮಯದೊಳ್, ಇವನ ಯೋಚನೆಗಳೆಲ್ಲಾ ಒಟ್ಟಾಗಿಸೇರಿ ಆಕೃತಿಯನ್ನು ಹೊಂದಿದ, ಒಂದು ಘನ, ಗಂಭೀರ, ಶಾಂತಯುಕ್ತವಾದ ದಿವ್ಯಾಕಾರವು ಕಾಣಬರಲು, ರಾಜಪುತ್ರನು ಆ ಬಿಂಬವನ್ನು ಕುರಿತು ನೀನು ಯಾರು? ಎಲ್ಲಿಂದ ಬಂದಿರುವೆ? ಇಲ್ಲಿಗೆ ಬರುವುದಕ್ಕೆ ಕಾರಣವೇನು? ಎಂದು ಆ ಯೋಚನಾ ಬಿಂಬವನ್ನು ಕುರಿತು ಪ್ರಶ್ನೆ ಮಾಡಿದನು. ಈ ರಾಜಪುತ್ರನ ಪ್ರಶ್ನೆಗೆ ಆ ಬಿಂಬವು ನಾನು "ಶ್ರಮಣನು," ಮನುಷ್ಯನಿಗೆ ಸಂಭವಿಸುವ ವಾರ್ಧಿಕ್ಯ, ವ್ಯಾಧಿ, ಮತ್ತು ಮರಣ ಇವುಗಳ ಭೀತಿಯಿಂದ ಸಂಸಾರವನ್ನು ತ್ಯಜಿಸಿ, ಸತ್ಯಮಾರ್ಗ

ದಿಂದ ನಿರ್ವಾಣಪದವಿಯನ್ನು ಹೊಂದಬೇಕೆಂದು ಬಂದಿರುವೆನು, ಎಂಬದಾಗಿ ಹೇಳಿದ್ದಲ್ಲದೆ ಪುನಃ—ಈ ಸರ್ವಪದಾರ್ಥಗಳೂ ನಾಶಭಾಜಕಗಳಾಗಿ ಇರುವವು. ಆದರೆ ಸತ್ಯವಂದೇ ನೈಜವು—ಸಮಸ್ತವೂ ವಿಕಾರವನ್ನು ಹೊಂದುತ್ತವೆ. ಆದರೆ ಬುದ್ಧನ (ಜ್ಞಾನಿಯ) ವಾಕ್ಯಗಳಾದರೋ ನಿರ್ವಿಕಾರವಾದವುಗಳಲ್ಲದೆ, ಸತ್ಯವಾದವುಗಳು. ಆದಕಾರಣ ನಾನು ನಾಶರಹಿತವಾದ ಸೌಖ್ಯವನ್ನು ಶಾಶ್ವತವಾದ ಐಶ್ವರ್ಯವನ್ನೂ, ಮತ್ತು ಜನನ ಮರಣರಹಿತವಾದ ಆನಂದವನ್ನೂ ಸಹಾ ಹೊಂದಬೇಕೆಂಬುವದೇ ನನ್ನ ಮುಖ್ಯೋದ್ದೇಶವಾಗಿರುವುದರಿಂದ, ಪ್ರಪಂಚಜ್ಞಾನವನ್ನು ನಾಶಮಾಡಿ, ಏಕಾಂತವಾಸಕ್ಕೆ ಬಂದಿರುವೆನು. ಮತ್ತು ಭಿಕ್ಷದಿಂದ ಜೀವಿಸುತ್ತಾ ಸತ್ಯವಸ್ತುವನ್ನು ಪಡೆಯುವ ತವಕದಲ್ಲಿಯೇ ಕಾಲಹರಣವನ್ನು ಮಾಡುವೆನು, ಎಂಬದಾಗಿ ಇವನ ಯೋಚನಾಬಿಂಬವು ಉತ್ತರ ಕೊಟ್ಟಿತು. ಈ ಉತ್ತರವನ್ನು ಕೇಳಿ ರಾಜಪುತ್ರನು ಪುನಹಾ ಬಿಂಬವನ್ನು ಕುರಿತು ಈ ಚಂಚಲವಾದ ಪ್ರಪಂಚ ಭೋಗದಿಂದ ಚಿತ್ತಕ್ಕೆ ಶಾಂತತೆಯು ಉಂಟಾಗುವುದೇ? ನನ್ನ ಮನಸ್ಸಾದರೋ ಈ ಶೂನ್ಯ ಪ್ರಪಂಚದ ಭೀತಿಯಿಂದ ಕೂಡಿರುವುದಲ್ಲದೆ ಈ ಜೀವಮಾನವೇ ನನಗೆ ಅಸಹ್ಯಕರವಾಗಿರುವುದೆಂದು ಹೇಳಿದನು. ಇದನ್ನು ಕೇಳಿದ ಬಿಂಬವು ರಾಜಪುತ್ರನನ್ನು ಕುರಿತು—ಎಲ್ಲಿ ಉಷ್ಣತೆಯುಂಟೋ ಅಲ್ಲಿ ಶೈತ್ಯದ ಸಂಭವವು ಸಹಜವು. ಅದರಂತೆಯೇ ಜನಗಳ ಸಂತೋಷದೊಡನೆಯೇ ದುಃಖವು ಕಾದಿರುವದು. ಆದಕಾರಣ ಮನುಷ್ಯನು ಸುಖ ದುಃಖಗಳನ್ನು ದಾಟಲು ಯತ್ನಿಸಬೇಕು. ಅದಕ್ಕೆ ತಕ್ಕ ಮಾರ್ಗವಿರುವುದನ್ನು ಬಿಟ್ಟಲ್ಲಿ ಎಂದಿಗೂ ದಾಟಲಾರೆವು. ಹ್ಯಾಗಂದರೆ—ಕೆಸರಿನಲ್ಲಿ ಬಿದ್ದ ಮನುಷ್ಯನು, ಹತ್ತಿರದಲ್ಲಿ ನಿರ್ಮಲವಾದ ಸರೋವರವನ್ನು ಕಂಡಾಗ್ಯೂ ಅದರಲ್ಲಿ ತನ್ನ ಮೈಕೊಳೆಯನ್ನು ತೊಳೆಯಲು ಯತ್ನಿಸದೇ ಇದ್ದಲ್ಲಿಯೂ, ವ್ಯಾಧಿಯಿಂದ ಪೀಡಿತನಾದ ಮನುಷ್ಯನು ವ್ಯಾಧಿನಿವಾರಣೆಮಾಡಬಲ್ಲ ವೈದ್ಯನು ನೆರೆಯಲ್ಲಿ ಇದ್ದಾಗ್ಯೂ ಅವನಿಂದ ಗುಣಹೊಂದಲು ಯತ್ನಿಸದೇ ಇದ್ದಲ್ಲಿಯೂ ಸಹಾ, ಅವು ಕೆಸರಿನಲ್ಲಿ ಬಿದ್ದವನ ಮತ್ತು ರೋಗಿಯ ತಪ್ಪುಗಳಾಗುವವೇ ವಿನಹಾ,

ಸರೋವರ ಮತ್ತು ವೈದ್ಯರುಗಳ ತಪ್ಪಾಗುವದಿಲ್ಲಾ. ಅದರಂತೆಯೇ ನಿನಗೆ ಉಂಟಾಗಿ ಇರುವ ಪ್ರಪಂಚಭೀತಿಗೆ ಮಾಂತ್ರಿಕಗಳಾದ ನನ್ನ ಮಾತನ್ನು ಕೇಳಿ ಅನುಸರಿಸದೇ ಇದ್ದಲ್ಲಿ ಅದು ನಿನ್ನ ದೋಷವಾಗು ವುದೇ ಹೊರ್ತು ನನ್ನ ದೋಷವಾಗುವುದಿಲ್ಲಾ ಎಂದು ಹೇಳಿತು. ಈ ರೀತಿಯಾದ "ಶ್ರಮಣ" ಬಿಂಬದ ದಿವ್ಯೋಕ್ತಿಗಳನ್ನು ಕೇಳಿದ ರಾಜಪುತ್ರನು ಪರಮಾನಂದಭರಿತನಾಗಿ "ಸ್ವಗತದಲ್ಲಿ" (ತನ್ನಲ್ಲಿ ತಾನೇ) :—ಜ್ಞಾನವನ್ನು ಸಂಪಾದಿಸುವುದಕ್ಕೆ ಇದೇ ಸಮಯವು. ಭಿಕ್ಷುಕನಾಗಿ ಸಂಚರಿಸುವುದಕ್ಕೆ ಇದೇ ಸಮಯವು. ಇದೇ ಪ್ರಪಂ ಚ ಬಂಧನವನ್ನು ಪರಿಹರಿಸಿಕೊಳ್ಳುವ ಸಮಯವು. ಇದೇ ನಿರ್ವಾಣ ಪದವಿಯನ್ನು ಹೊಂದುವ ಸಮಯವು ಎಂಬದಾಗಿ ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತಾ ಇರುವ ರಾಜಪುತ್ರನ ಚಿತ್ತಮನಸ್ಸಿಗೆ "ಶ್ರಮ ಣ" ಬಿಂಬವು ಶಿರಃ ಕಂಪನದಿಂದ ಮೆಚ್ಚಿ ಈತನು ನಿರ್ವಾಣಪದವಿಗೆ ಅಧಿಕಾರಿಯೆಂದು ತಿಳಿಯಿತು. ಅನಂತರ ಬಿಂಬವು ರಾಜಪುತ್ರನನ್ನು ಕುರಿತು—ಎಲೈ ರಾಜಪುತ್ರನೇ, ಜ್ಞಾನವನ್ನು, ನಿರ್ವಾಣಪದವಿಯನ್ನು ಸಹಾ ಹೊಂದಲು ಇದೇ ಅಂಕುರಿಸುವ ಕಾಲವಾಗಿರುವುದು. ನಿನಗೆ ಸರ್ವವೂ ಸಾಧ್ಯವಾಗುವುದು. ನೀನೇ ಬೋಧಿಸತ್ವನು. ನೀನೇ ಬುದ್ಧನು (ಜ್ಞಾನಿಯು). ನಿನ್ನ ಮನೋಗತದಂತೆ ಲೋಕಕ್ಕೆಲ್ಲಾ ಶಾಂತತೆಯೂ ಉಂಟಾಗುವುದು. ಸತ್ಯದ ನೆಲೆಯನ್ನು ಕಾಣು. ನಿನ್ನ ಕೋರಿಕೆಯನ್ನು ದೃಢಪಡಿಸು. ಸೂರ್ಯನು ಪ್ರತಿ ಋತುವಿನ ಲ್ಲಿಯೂ, ತನ್ನ ಮಾರ್ಗದಲ್ಲೇ ಗಮಿಸುವಂತೆ ಸತ್ಯಮಾರ್ಗದಲ್ಲಿಯೇ ಸಂಚರಿಸು. ಅನಂತರ ನಿರ್ವಾಣ ಪದವಿಯನ್ನು ಹೊಂದುವೆ. ನೀನೇ ಬುದ್ಧನಾಗುವೆ. ನೀನೇ ನಮ್ಮ ಗುರುವಾಗುವೆ. ನೀನೇ ಜಿತನಾಗುವೆ. ನೀನೇ ತಥಾಗತನಾಗುವೆ. ನೀನೇ ಭಗವಂತನಾಗುವೆ. ಎಂಬದಾಗಿ ಹೇಳಿ ಆ ಬಿಂಬವು ಅಂತರ್ಧಾನವಾಯಿತು. ಅನಂತರ ರಾಜಪುತ್ರನು ವಿಸ್ಮಯಗೊಂಡು ತನ್ನಲ್ಲಿ ತಾನೇ :—ಸತ್ಯವಾಗಿಯೂ ನಾನೇ ಬುದ್ಧ ನಾಗುವೆನು. ನನ್ನ ಸತ್ಯಕಾರ್ಯಕ್ಕೆ ಬದ್ಧಕಂಕಣನಾಗುವೆನು. ಈ ನನ್ನ ಮಾತಿಗೆ ಎಂದಿಗೂ ಚ್ಯುತಿಯುಂಟಾಗಲಾರದು. ಪ್ರಪಂಚದ

ಕರೆಯಿಂದ ನಿವೃತ್ತನಾಗುವೆನು. ಈ ರಾಜ್ಯಪದವಿಯನ್ನು ಈ ಕ್ಷಣದಲ್ಲಿಯೇ ತ್ಯಜಿಸಿ ನಿರ್ವಾಣ ಸುಖವನ್ನು ಪಡೆಯಲು ತಪವಂಗೈಯ್ಯುವೆನು. ಎಂಬದಾಗಿ ದೃಢಪ್ರತಿಜ್ಞೆಯನ್ನು ಮಾಡಿಕೊಂಡು ಆ ರಾತ್ರಿಯಲ್ಲಿಯೇ ಪೂರ್ಣ ವೈರಾಗ್ಯದೊಡನೆ ಅರಮನೆಗೆ ಬಂದನು.

## ಬುದ್ಧನು ಸಂಸಾರವನ್ನು ತ್ಯಜಿಸಿ ಅರಣ್ಯಕ್ಕೆ ತೆರಳಿದ್ದು

ಅನಂತರ ರಾಜಪುತ್ರನು ತನ್ನ ಏಕಾಂತ ಮಂದಿರವನ್ನು ಸೇರಿದನು. ಮತ್ತು ತನ್ನ ಪ್ರಿಯ ಪತ್ನಿಪುತ್ರರನ್ನು ಒಂದಾವರ್ತಿ ಆಲಿಂಗಿನ ಮಾಡಿಕೊಂಡು, ಅವರಿಂದ ಸಮ್ಮತಿಯನ್ನು ಪಡೆದು, ವನವಾಸಕ್ಕೆ ಹೊರಡಲುದ್ಯುಕ್ತನಾಗುವೆನೆಂದು ಯೋಚಿಸಿ ನೋಡುವ ಕಾಲಕ್ಕೆ ಸರಿಯಾಗಿ ಇವನ ಪತ್ನಿಯು ನಿದ್ರೆಗೈಯ್ಯುತ್ತಿದ್ದಳು. ಮತ್ತು ಇವನ ಶಿಶುವು ತಾಯಿಯ ತೋಳುಗಳ ಮೇಲೆ ತಲೆಯನ್ನಿಟ್ಟುಕೊಂಡು ಮಾತಾಶಿಶುಗಳೀರ್ವರೂ ಸುಷುಪ್ತಿಯಲ್ಲಿ (ಪೂರ್ಣನಿದ್ರೆ) ಇದ್ದರು. ಅವರುಗಳನ್ನು ನೋಡಿ ನಿದ್ರಾಭಂಗ ಮಾಡಬಾರದೆಂದು ಯೋಚಿಸಿ, ಹಾಗೆಯೇ ಒಂದು ಕ್ಷಣ ಅಲ್ಲಿ ನಿಂತುಕೊಂಡು, ಏಕಾಂತ ಮಂದಿರದಲ್ಲಿ ತನಗೋಸ್ಕರ ಸಿದ್ಧಪಡಿಸಿದ್ದ ಗಂಧಮಾಲ್ಯಾಂಬರ ತಾಂಬೂಲಾದಿಗಳನ್ನೂ, ಆ ಏಕಾಂತ ಮಂದಿರದ ಶೃಂಗಾರವನ್ನೂ, ಮತ್ತು ಪತಿಯ ಆಗಮನವನ್ನೇ ನಿರೀಕ್ಷಿಸುತ್ತಾ ಪತಿಯು ಬಾರದ್ದರಿಂದುಂಟಾದ ವ್ಯಥೆಯಿಂದ ತಾಂಬೂಲ ಸೇವನೆಯು, ಗಂಧಮಾಲ್ಯಾದಿ ಲೇಪನವೂ, ಸಹಾ ಇಲ್ಲದೆ ಮೂರ್ಛೆ ಬಂದಂತೆ ಮುಕುಳಿತನಯನಳಾಗಿ ಬಾಡಿದ ವದನಾರವಿಂದ ಉಳ್ಳ, ನವಮೋಹನಾಂಗಿಯಾದ ತನ್ನ ಪ್ರಿಯಪತ್ನಿಯನ್ನೂ, ಮತ್ತು ತಾಯಿಯ ಸ್ತನ್ಯ ಪಾನಮಾಡುತ್ತಾ ಹಾಗೆಯೇ ನಿದ್ರಾನ್ವಿತವಾಗಿರುವ ಮುದ್ದಿನ ಮುದ್ದೆಯಂತೆ ಕಂಗೊಳಿಸುವ ಬಾಲರತ್ನವನ್ನೂ ಸಹಾ ಅನಿಮೇಷಾಕ್ಷಿಯಿಂದೀಕ್ಷಿಸಿ, ನಯನಾಂಬುವನ್ನುಸುರಿಸುತ್ತಾ ಮನ

ತಾ ಸಾಗರದಲ್ಲಿ ಮುಳುಗಿ, ಅಯ್ಯೋ ! ಈ ಪತಿವ್ರತಾಶಿರೋಮಣಿಯಾ
ಗಿಯೂ, ಕೋಮಲಾಂಗಿಯಾಗಿಯೂ, ಪತಿವಿಯೋಗವನ್ನು ಒಂದು
ಕ್ಷಣವೂ ಅನುಭವಿಸಲಾರಳಾಗಿಯೂ ಸಹಾ ಇರುವ, ಈ ಪ್ರಿಯಪ
ತ್ನಿಯನ್ನು ಸಮಾಧಾನಗೊಳಿಸಿ ಇವಳಿಂದ ಸಮ್ಮತಿಯನ್ನು ಹೊಂದದೆ
ಯೂ, ಮತ್ತು ತನ್ನನ್ನೇ ಹೋಲುವ ಪ್ರೇಮಪುತ್ರನನ್ನು ಆಲಿಂಗಿನ
ಮಾಡಿ ಸಮಾಧಾನ ಪಡಿಸದೆಯೂ ನಿರಪರಾಧಿಗಳಾದವರಿಗೆ ವಂಚನೆ
ಯನ್ನು ಮಾಡಿ ಹೊರಡಬೇಕಾಯಿತೇ ? ಎಂದು, ಗದ್ಗದಕಂಠನಾಗಿ,
ಎಚ್ಚರವಾದರೆ ನಿದ್ರಾಭಂಗವಾದೀತಲ್ಲವೇ ! ಎಂಬ ಶಂಕೆಯಿಂದ ಸ್ತಂಭೀ
ಭೂತನಾಗಿ ಸ್ಮರಣೆ ತಪ್ಪಿದವನಾದನು. (ವಾಚಕರೇ ! ಈಗಿನ ಕಾಲ
ದಲ್ಲಿ ಸನ್ಯಾಸವನ್ನು ವಹಿಸಿ ವೃದ್ಧರಾಗಿ ಇರುವವರೇ ಪತ್ನಿಪುತ್ರಾದಿಗ
ಳಲ್ಲಿ ಅಭಿಮಾನವನ್ನು ಬಿಡಲಾರದೆ ಒದ್ದಾಡುತ್ತಾ ಇರುವಾಗ್ಯೆ, ರಾಜ
ಪುತ್ರನಾಗಿಯೂ, ಯೌವನಶಾಲಿಯಾಗಿಯೂ, ಸರ್ವಭೋಗಯುಕ್ತ
ನಾಗಿಯೂ ಇರುವ ಇವನಿಗೆ ಶಯ್ಯಾಗೃಹದಲ್ಲಿ, ಗಂಧಮಾಲ್ಯಾದಿವಾಸ
ನಾದ್ರವ್ಯದಿಂದ ಸಿದ್ಧಳಾಗಿರುವ ಬಾಲಯುವತಿಯನ್ನು ನೋಡಿದ್ದರಿಂದ
ಚಿತ್ತಚಂಚಲವಾಗತಕ್ಕದ್ದೇನೂ ಅತಿಶಯವಲ್ಲವು) ಅನಂತರ ರಾಜ
ಪುತ್ರನು ಸ್ವಲ್ಪ ಎಚ್ಚತ್ತು ಉದ್ಯಾನದಲ್ಲಿ ತನ್ನ ಯೋಚನಾಬಿಂಬವಾದ
"ಶ್ರಮಣ" ನು ಹೇಳಿದ ದಿವ್ಯೋಕ್ತಿಗಳನ್ನು ನೆನೆಸಿಕೊಂಡು ಪ್ರಜ್ಞಾ
ತಾಳಿ, ಆಹಾ ! ಈ ದೋಷಗಳನ್ನೆಲ್ಲಾ ನೋಡುತ್ತಾ ಇದ್ದಲ್ಲಿ ಇದ
ಕ್ಕಿಂತತಿಶಯವಾದ ದೋಷಗಳು ಅನೇಕವಾಗಿ ಈ ಪ್ರಪಂಚ ಸಂಬಂಧ
ವಾದ ಜೀವಮಾನದಲ್ಲಿ ಇರುವವಾದ ಕಾರಣ ನಾನು ಹೊರಡುವು
ದೇ ಸಿದ್ಧವೆಂದು, ಜಿತಮನಸ್ಕತೆಯೆಂಬ ಕೊಡಲಿಯಿಂದ ಅಗಾಧವಾದ
ಅಭಿಮಾನ ವೃಕ್ಷವನ್ನು ಛೇದಿಸಿ, ಅಂತಃಪುರದಿಂದಿಳಿದು ಅಶ್ವಶಾಲೆಗೆ
ಬಂದು, ತನಗೆ ಪ್ರೇಮವಾಗಿದ್ದ "ಕಂಥಕ" ವೆಂಬ ಹೆಣ್ಣು ಕುದುರೆ
ಯನ್ನು ಆರೋಹಣ ಮಾಡಿ, ತನಗೆ ಆಪ್ತನಾದ ಸಾರಥಿ "ಚನ್ನ" ನ
ಸಮೇತ ರಾಜಾಲಯದ್ವಾರವನ್ನತಿಕ್ರಮಿಸಿ, ಆ ನಿಶಿಯಲ್ಲಿಯೇ ಉ
ದ್ಯಾನ ಮಾರ್ಗವಾಗಿ ಗಮನವನ್ನು ಮಾಡಿದನು. ಈ ರೀತಿಯಾಗಿ
ರಾಜಪುತ್ರನಾದ "ಸಿದ್ಧಾರ್ಥ" ನು ರಾಜಭೋಗವನ್ನು ಬಿಟ್ಟು,

ಪ್ರಪಂಚ ಸುಖಗಳನ್ನು ತ್ಯಜಿಸಿ, ಸಂಸಾರವನ್ನು ವರ್ಜಿಸಿ, ಪರದೇಶಿಯಾದ ಭಿಕ್ಷುಕನಾಗಲು, ಭೂಮಂಡಲವನ್ನೆಲ್ಲಾ ಅಂಧಕಾರವುಮುಸುಕಿತು ; ಆದರೆ ನಕ್ಷತ್ರಗಳು ಮಾತ್ರ ಪ್ರಕಾಶದೊಡನೆ ಬೆಳಗಿದವು.

"ವಾಚಕಮಹಾಶಯರೇ ! ಈ ಭಾಗವನ್ನು ತಾವುಗಳು ಓದುವದರಿಂದ ಉಂಟಾಗುವ, ರಾಜಪುತ್ರನು ಭಿಕ್ಷುಕನಾದ ವ್ಯಸನವು, ಅನಾಥರಾದ ಇವನ ಪತ್ನಿಪುತ್ರಾದಿಗಳ ವಿಷಯದಲ್ಲುಂಟಾಗುವ ಕನಿಕರವೂ, ವಂಶೋದ್ಧಾರಕನಾದ ಪುತ್ರನು ಪರದೇಶಿಯಾದ್ದರಿಂದ ದುಃಖಿತನಾದ ರಾಜನ ವಿಷಯದಲ್ಲುಂಟಾಗುವ ವಿಷಾದವು, ಇದನ್ನು ತಿಳಿದ ಮೇಲೆ ಪುರನಿವಾಸಿಗಳಿಗೆ ಸಂಭವಿಸುವ ಭೀತಿಯ ವಿಷಯದಲ್ಲುಂಟಾಗುವ ಭಯಾನಕವು, ರಾಜಪುತ್ರನು ಹೊರಡುವ ಕಾಲದಲ್ಲಿ ಧರಿಸಿದ ಜಿತಮನಸ್ಕತೆಯ ವಿಷಯದಲ್ಲಿ ಉಂಟಾಗುವರೌದ್ರವು, ರಾಜಪುತ್ರನ ವೈರಾಗ್ಯದಿಂದ ವೇಷಸನ್ಯಾಸಿಗಳಿಗೆ ಉಂಟಾಗುವ ಅವಮಾನ ವಿಷಯದಲ್ಲಿ ಉಂಟಾಗುವ ಆಶ್ಚರ್ಯವು ಮತ್ತು ಹಾಸ್ಯವು, ಶಯನಾಗೃಹದಲ್ಲಿ ಬುದ್ಧನು ಪತ್ನಿ ಪುತ್ರಾದಿಗಳನ್ನು ನೋಡುವ ಕಾಲದಲ್ಲುಂಟಾದ ಶೃಂಗಾರ ರಸವೂ, ಲೋಕಕ್ಕೆಲ್ಲಾ ಈ ಬುದ್ಧನಿಂದ ಕ್ಷೇಮ ಉಂಟಾಗುವದೆಂದು ಭಾವಿಸಿದ ಜ್ಞಾನಿಗಳಿಗೆ ಉಂಟಾಗುವ ಆನಂದವು, ಇವೇ ಮುಂತಾದ ನವರಸಗಳಿಂದ ಕೂಡಿದ ಯೋಚನೆಯು ನಿಮ್ಮಗಳ ಮನಸ್ಸನ್ನು ಭೇದಿಸದೇ ಇರಲಾರದು. ಈಗಿನ ಕಾಲದಲ್ಲಿ ಈ ರೀತಿಯಾದ ವೈರಾಗ್ಯವನ್ನು ತಾಳುವವರು ಸಿಕ್ಕುವರೇ ? ಎಂದಿಗೂ ಇಲ್ಲ. ಸರ್ವವನ್ನೂ ತ್ಯಜಿಸಿರುವೆ ಎಂದು ಲೋಕಕ್ಕೆ ತೋರ್ಪಡಿಸುವ ಸನ್ಯಾಸಿಗಳೇ, ಪತ್ನಿಪುತ್ರಾದಿಗಳಲ್ಲಾಗಲಿ, ಅವರು ಇಲ್ಲದೆ ಇದ್ದಲ್ಲಿ ಭ್ರಾತೃಪುತ್ರಾದಿ ಬಂಧು ವರ್ಗದವರಲ್ಲೇ ಆಗಲಿ ಅಭಿಮಾನವನ್ನು ಬಿಡುವುದೇ ಅಸಾಧ್ಯವಾಗಿರುವಲ್ಲಿ, ಇನ್ನು ಗೃಹಸ್ಥರಿಂದ ಸಾಧ್ಯವೇ ? ತಾವೇ ಯೋಚಿಸಿರಿ."

## ಅರಮನೆಯ ರೋದನವು

ಅನಂತರ "ಸಿದ್ಧಾರ್ಥ"ನು ಕೆಲವು ದೂರ ಪ್ರಯಾಣಮಾಡಿ, ತಾನು ಅಲಂಕರಿಸಿದ್ದ ದಿವ್ಯ ರತ್ನಮಾಲ್ಯಾಂಬರಾದಿಗಳನ್ನೆಲ್ಲಾ "ಚನ್ನ" ನಿಗೆ

ಕೊಟ್ಟು ಅಶ್ವವನ್ನೂ ಅವನಿಗೇ ಒಪ್ಪಿಸಿ, ಚನ್ನನನ್ನು ಕುರಿತು ; ನನ್ನ ತಂದೆಯಾದ ಶುದ್ಧೋದನನಿಗೂ ಮತ್ತು " ಯಶೋದರೆ " ಗೂ, ಸಹಾ ಸಿದ್ಧಾರ್ಥನು ರಾಜ್ಯವನ್ನು, ಸಂಸಾರವನ್ನು ಸಹಾ ಬಿಟ್ಟು ಭಿಕ್ಷುಕನಾದನೆಂದು ತಿಳುಹಿಸೆಂಬದಾಗಿ ಹೇಳಿ ದುಃಖಪಡುವ ಚನ್ನನನ್ನು ಸಮಾಧಾನಗೊಳಿಸಿ ಕಳುಹಿಸಿದನು. ಅನಂತರ ಚನ್ನನು ಪುರ ಪ್ರವೇಶಮಾಡಲು, " ಶುದ್ಧೋದನನು " ಎಲೈ ಚನ್ನನೇ, ಸಿದ್ಧಾರ್ಥನು ಎಲ್ಲಿರುವನೋ ಕಾಣೆನು. ಶಯ್ಯಾಗೃಹದಲ್ಲೂ ಇಲ್ಲವೆಂಬ ವರ್ತಮಾನವು ಬಂದಿರುವದು. ಆದಕಾರಣ ಉದ್ಯಾನವನದಲ್ಲಿರಬಹುದು, ಹೋಗಿ ಕರೆದುಕೊಂಡು ಬಾ ಎಂಬದಾಗಿ ಹೇಳಲು, ಚನ್ನನು ಸಿದ್ಧಾರ್ಥನು ಹೇಳಿ ಕಳುಹಿಸಿದ ಮಾತುಗಳನ್ನು ನೆನೆದುಕೊಂಡು ದುಃಖಿಸಲು ಪ್ರಾರಂಭಿಸಿದನು. ಇದನ್ನು ನೋಡಿ ಧೊರೆಯು ದುಃಖಕ್ಕೆ ಕಾರಣವೇನೆಂದು, ಕೇಳಲು ಚನ್ನನು ತನಗೆ ರಾಜಪುತ್ರನು ಕೊಟ್ಟಿದ್ದ ರತ್ನಮಾಲ್ಯಾಂಬರಗಳನ್ನು ಮುಂದಿಟ್ಟು ಗದ್ಗದ ಕಂಠದೊಡನೆ, ನಿನ್ನ ಪುತ್ರನು ರಾಜ್ಯವನ್ನು, ಸಂಸಾರವನ್ನು, ಸಹಾ ಬಿಟ್ಟು ಭಿಕ್ಷುಕನಾದ ಬುದ್ಧನಾದನೆಂಬದಾಗಿ ಹೇಳಿದನು. ಈ ಮಾತು ಕಿವಿಗೆ ಬಿದ್ದ ಒಡನೆಯೇ ಮೂರ್ಛೆಯನ್ನು ಹೊಂದಿ ಸ್ವಲ್ಪ ಎಚ್ಚತ್ತು ಮಹಾ ದುಃಖದಿಂದ ಈಗ ಎಲ್ಲಿರುವನು. ಎಂದು ಕೇಳಲು ನಡೆದ ವರ್ತಮಾನವನ್ನೆಲ್ಲಾ ತಿಳುಹಿಸಿದನು. ಅನಂತರ ಧೊರೆಯು ತನ್ನ ಪುತ್ರನನ್ನು ಹುಡುಕುವದಕ್ಕೆ ದೂತರನ್ನು ಕಳುಹಿಸುವಂತೆ ಮಂತ್ರಿಗೆ ಆಜ್ಞೆ ಮಾಡಿದನು. ಇದನ್ನು ತಿಳಿದ ರಾಣಿವಾಸದ ಪ್ರಜಾವತಿ ಮುಂತಾದ ಸ್ತ್ರೀಯರೆಲ್ಲಾ ರೋದನ ಧ್ವನಿಯನ್ನು ಮಾಡಿದರು. ಆಗತಾನೆ ನಿದ್ರೆಯಿಂದ ಎದ್ದು ಪತಿಯು ರಾತ್ರಿಬಾರದೇ ಇರುವದಕ್ಕೆ ಕಾರಣವನ್ನು ಯೋಚಿಸುತ್ತಾ ಇದ್ದ ಯಶೋದರೆಯು ಈ ರೋದನ ಧ್ವನಿಯನ್ನು ಕೇಳಿ ದಿಗ್ಭ್ರಮೆ ಪಟ್ಟು ಆ ಸ್ಥಳಕ್ಕೆ ಬಂದಳು. ಇವಳನ್ನು ನೋಡಿ ಅಲ್ಲಿದ್ದ ಸ್ತ್ರೀಯರೆಲ್ಲಾ ರೋದನವನ್ನು ಹೆಚ್ಚಿಸಿದರು. ಇದನ್ನು ನೋಡಿ ಇವಳೂ ದುಃಖಿಸುತ್ತಾ ಕಾರಣವೇನೆಂದು ಕೇಳಿದಳು. ಪ್ರಜಾವತಿಯು ಯಶೋದರೆಯನ್ನು ಕುರಿತು :—ನಿನ್ನ ಪತಿಯು ನಮ್ಮಗಳೆಲ್ಲರನ್ನೂ ದುಃಖ

ಸಮುದ್ರದಲ್ಲಿ ಮುಳುಗಿಸಿ ತಾನು ರಾಜ್ಯವನ್ನೂ ಸಂಸಾರವನ್ನೂ ಸಹಾ ತ್ಯಜಿಸಿ ಅರಣ್ಯಕ್ಕೆಹೋದನೆಂದು ಹೇಳಲು ಹಾಗೆಯೇ ಮೂರ್ಛಾವ್ರತಳಾದಳು. ಅನಂತರ ಶೈತ್ಯೋಪಚಾರದಿಂದ ದಾದಿಯರು ಸಮಾಧಾನಗೊಳಿಸಲು, ಎಚ್ಚತ್ತು ದುಃಖವನ್ನು ಸಹಿಸಲಾರದೆ ತನ್ನ ಏಕಾಂತಮಂದಿರಕ್ಕೆ ತೆರಳಿ ಪತಿಯನ್ನು ಕುರಿತು ಪ್ರಲಾಪಿಸುತ್ತಾ, ಎಲೈ ಮನೋವಲ್ಲಭನೇ! ನಾನು ನಿನಗೆ ಏನು ಅಪರಾಧವನ್ನು ಮಾಡಿದೆನು? ನಿರಂತರದಲ್ಲೂ ನಿನ್ನನ್ನೇ ಸ್ಮರಿಸುತ್ತಾ, ನಿನ್ನ ಸಾನ್ನಿಧ್ಯವನ್ನೇ ಸ್ವರ್ಗವೆಂದು ಭಾವಿಸುತ್ತಾ, ನಿನ್ನ ದರ್ಶನವನ್ನೇ ಭಗವಂತನ ದರ್ಶನವೆಂದು ಭಾವಿಸುತ್ತಾ, ನಿನ್ನ ಸೇವೆಯನ್ನೇ ದೇವರ ಸೇವೆಯೆಂದು ಭಾವಿಸುತ್ತಾ, ನಿನ್ನ ಆಶ್ರಯವನ್ನೇ ಕಲ್ಪವೃಕ್ಷಾಶ್ರಯವೆಂದು ಭಾವಿಸುತ್ತಾ, ಇದ್ದ ನನ್ನನ್ನು ನಿಷ್ಕಾರಣವಾಗಿ ತ್ಯಜಿಸಿ ಹೋಗಬಹುದೆ? ನಿರಂತರದಲ್ಲೂ "ರಾಹುಲ" ನನ್ನು ನೋಡಿ ನೇತ್ರಾನಂದವನ್ನು ಹೊಂದುತ್ತಾ ಇದ್ದ, ನಿನ್ನ ಕಣ್ಣುಗಳು ಈಗ ಯಾರನ್ನು ನೋಡಿ ಸಂತೋಷಪಡುವವು? ಹಂಸತೂಲಿಕಾತಲ್ಪದಲ್ಲಿ ಮಲಗುವ ನೀನು ಈಗ ಎಲ್ಲಿ ಮಲಗುವೆ? ಷಡ್ರಸೋಪೇತವಾದ ಭೋಜನಮಾಡುವ ನೀನು ಈಗ ಏನನ್ನು ಭುಂಜಿಸುವೆ? ನಿನ್ನನ್ನು ಪೋಷಣೆಮಾಡುವರ್ಯಾರು? ಈ "ರಾಹುಲ" ನೂ ನಿನಗೆ ಅಪರಾಧಮಾಡಿರುವನೇ? ನಾನು ಇನ್ಯಾರನ್ನು ನೋಡಿ ಆನಂದಿಸಲಿ? ನನಗೆ ಇನ್ಯಾರು ಪಾಲಕರು? ವಿವಾಹದಲ್ಲಿ ನೀನು ನನಗೆ ಕೊಟ್ಟ ಭಾಷೆಗಳನ್ನು ಮರತೆಯಾ? ನಿನ್ನ ಕೋಮಲವಾದ ಮನಸ್ಸು ಈ ರೀತಿ ಕಠಿಣವಾಯಿತೇ? ನನಗೆ ಹೇಳಿದ್ದ ಪಕ್ಷದಲ್ಲಿ ನಾನೂ ನಿನ್ನ ಸೇವೆಗೆ ಬರುತ್ತಿದ್ದೆನಲ್ಲಾ; ರಾತ್ರಿಯಲ್ಲಾ ನಿನ್ನನ್ನೇ ಸ್ವಪ್ನದಲ್ಲೂ ನೆನೆಸುತ್ತಾ ಇದ್ದ ನಾನು ಈ ದುಃಖವಾರ್ತೆಯನ್ನು ಕೇಳಬೇಕಾಯಿತಲ್ಲಾ. ನನ್ನ ವಿಷಯದಲ್ಲಿ ನಿನಗೆ ಸ್ವಲ್ಪವೂ ಕನಿಕರವಿಲ್ಲವೇ? ಈ ರಾಜಗೃಹವು ನನಗೆ ಸ್ಮಶಾನವಾಗಿರುವದಲ್ಲಾ? ಈ ದುಃಖವನ್ನು ಕೇಳಿ ಸಮಾಧಾನ ಪಡಿಸುವವರು ಯಾರು? ಈ ದುಃಖವನ್ನು ಯಾರಿಗೆ ಮೊರೆಯಿಡಲಿ? ಅಯ್ಯೋ ವಿಧಿಯೇ? ಎಂದು ಅನೇಕ ವಿಧದಿಂದ ಪ್ರಲಾಪಿಸುತ್ತಾ. ತನ್ನ ಶಯ್ಯಾಗೃಹದ ಅಲಂಕಾರವನ್ನೆಲ್ಲಾ

ತೆಗೆದು ಹಾಕಿ, ವಸ್ತ್ರಭೂಷಣಗಳನ್ನೆಲ್ಲಾ ಬಿಸುಟು, ನಾರುಶೀರೆಯನ್ನು ಧರಿಸಿ, ಕಂದಮೂಲಗಳನ್ನು ಭಕ್ಷಿಸುತ್ತಾ, ನಿರಂತರದಲ್ಲೂ ಪತಿಯನ್ನೇ ಕುರಿತು ಪ್ರಲಾಪಿಸುತ್ತಾ ಕಾಲವನ್ನು ಕಳೆಯಲು ಪ್ರಾರಂಭಿಸಿದಳು.

## ಬುದ್ಧನು ಸನ್ಯಾಸವನ್ನು ವಹಿಸಿದ್ದು.

ಅನಂತರ ಸಿದ್ಧಾರ್ಥನು ಕೆಲವು ದೂರ ಅರಣ್ಯದಲ್ಲಿ ಪ್ರಯಾಣ ಮಾಡುತ್ತಾ ಇರುವ ಕಾಲಕ್ಕೆ ಸರಿಯಾಗಿ, ಒಬ್ಬ ವ್ಯಾಧ (ಬೇಡರವ) ನು ಮೃಗಗಳ ದೃಷ್ಟಿಯನ್ನು ವಂಚಿಸ.ವ ಉದ್ದಿಶ್ಯ ಕಾವಿಬಣ್ಣದ ವಸ್ತ್ರಗಳನ್ನು ಧರಿಸಿ ಬೇಟೆಗಾಗಿ ಎದುರಿಗೆ ಬರುತ್ತಾ ಇದ್ದನು. ಇವನನ್ನು ಕಂಡ ಸಿದ್ಧಾರ್ಥನು ನನಗೆ ಬೇಕಾಗಿದ್ದ ಕಾಷಾಯವಸ್ತ್ರವನ್ನು ಧರಿಸಿಕೊಂಡು ದೇವರೇ ನನ್ನ ಎದುರಿಗೆ ಬರುತ್ತಾ ಇರುವನೆಂದು ಭಾವಿಸಿ, ಅವನನ್ನು ಹತ್ತಿರಕ್ಕೆ ಬಹು ಮರ್ಯಾದೆಯಿಂದ ಕರೆದು, ಎಲೈ ಮಹಾತ್ಮನೇ ನಾನು ಧರಿಸಿರುವ ಈ ಪಟ್ಟೇ ವಸ್ತ್ರಗಳನ್ನು ಮತ್ತು ಬೇಟೆಗೆಯೋಗ್ಯವಾದ ಈ ಕತ್ತಿಯನ್ನೂ ಸಹಾ ನೀನು ತೆಗೆದುಕೊಂಡು ನಿನ್ನ ಕಾಷಾಯವಸ್ತ್ರವನ್ನು ನನಗೆ ಕೊಡುವಿಯಾ ಎಂದು ಕೇಳಲು, ಆ ವ್ಯಾಧನು ಭೀತನಾಗಿ, ನೀನು ರಾಜಪುತ್ರನಂತೆ ಕಾಣುತ್ತೀ. ಈ ದಿವ್ಯ ವಸ್ತ್ರಗಳು ನಿನಗೆ ಒಪ್ಪುವವಲ್ಲದೆ ಮೃಗಯಾಜೀವಿಯಾದ ನನಗೆ ಎಂದಿಗೂ ಒಪ್ಪಲಾರದು. ಅಲ್ಲದೆ ನನ್ನ ಬೇಟೆಗೆ ಈ ಕಾವಿಬಣ್ಣದ ವಸ್ತ್ರವು ಬಹಳ ಅನುಕೂಲವಾಗಿರುವುದು ಎಂದು ಹೇಳಿದನು. ನಂತರ ಸಿದ್ಧಾರ್ಥನು ಅವನನ್ನು ಬಹುವಿಧದಿಂದ ಬೇಡಿದನು. ಅದರಂತೆ ಅವನು ಕೊಡುವುದಾಗಿ ಒಪ್ಪಲು ಸಿದ್ಧಾರ್ಥನು ತಾನು ಧರಿಸಿದ್ದ ಕತ್ತಿಯನ್ನು ಒರೆಯಿಂದ ತೆಗೆದು ಕೋಮಲವಾಗಿ ಬೆಳೆದಿದ್ದ ತನ್ನ ಜುಟ್ಟನ್ನೆಲ್ಲಾ ಆ ಕತ್ತಿಯಿಂದ ಕತ್ತರಿಸಿಹಾಕಿ, ಆ ಕತ್ತಿಯನ್ನು ಮತ್ತು ದಿವ್ಯವಾದ ತನ್ನ ವಸ್ತ್ರಗಳನ್ನೂ ಸಹಾ ಅವನಿಗೆ ಕೊಟ್ಟು ಅದಕ್ಕೆ ಪ್ರತಿಯಾಗಿ ಆ ಕಾಷಾಯವಸ್ತ್ರವನ್ನು ಅವನಿಂದ ತೆಗೆದುಕೊಂಡು ತಾನು ಧರಿಸಿ, ಮುಂದೆ ಕೆಲವು ದೂರ ಪ್ರಯಾಣ

ಮಾಡಿ ಬಂದು ಯತ್ಯಾಶ್ರಮವನ್ನು ಸೇರಿದನು. ನಂತರ ಸಿದ್ಧಾರ್ಥನು ಆ ಆಶ್ರಮದಲ್ಲಿ ಇರುವ ವೇದಾಧ್ಯಯನ ಸಂಪನ್ನರಾದ ಬ್ರಹ್ಮಚಾರಿಗಳಿಂದ ಯಜ್ಞ ಯಾಗಾದಿಗಳ ವಿಷಯವನ್ನೆಲ್ಲಾ ಬಹು ಭಕ್ತಿಯಿಂದ ಕಲಿತುಕೊಂಡನು. ಇಷ್ಟಕ್ಕೆ ಇವನ ಮನಸ್ಸು ತೃಪ್ತಿಯಾಗದೆ, ಆ ಬ್ರಹ್ಮಚಾರಿಗಳನ್ನು ಕುರಿತು, ಇದಕ್ಕಿಂತಲೂ ಉತ್ತಮವಾದ ತತ್ವವಿರುವುದೇ? ಎಂದು ಕೇಳಲು, ಅವರು ಇದಕ್ಕೆ ಅತೀತವಾದದ್ದು ಯಾವದಿರುವುದೋ ನಾವು ಕಾಣೆವು. ಬ್ರಾಹ್ಮಣನಿಗೆ ಇದಕ್ಕಿಂತಲೂ ಅಧಿಕವಾದ ತತ್ವವೆ ಇಲ್ಲವು. ನಿನಗೆ ಇಚ್ಛೆ ಇದ್ದಲ್ಲಿ ಹಿಂಮವತ್ಪರ್ವತದ ಸಮೀಪದಲ್ಲಿ ಇರುವ "ಪಿಂಡಪರ್ವತ" ದ ಅಗ್ರಭಾಗದಲ್ಲಿ "ಅಲಲೋಮ" ನೆಂಬ ಋಷಿಯು ಬ್ರಹ್ಮವೇತ್ತನಾಗಿರುವನಂತೆ. ಅವನಲ್ಲಿಗೆ ಹೋದಲ್ಲಿ ಇದಕ್ಕಿತತಿಶಯವಾದ ತತ್ವವು ಸಿಕ್ಕುವದೋ ಏನೋ ಕಾಣೆವು. ಹೋಗಿ ನೋಡೆಂದು ಹೇಳಲು, ಸಿದ್ಧಾರ್ಥನು ಅವರುಗಳಿಗೆ ವಂದನೆಯನ್ನು ಮಾಡಿ, ಅವರಿಂದ ಅಪ್ಪಣೆಯನ್ನು ಪಡೆದು, ಆ ಪಿಂಡಪರ್ವತವನ್ನು ಸೇರಿದನು. ಅಲ್ಲಿ ಮಹಾ ತೇಜಸ್ವಿಯಾಗಿಯೂ, ಬುದ್ಧನಾಗಿಯೂ ಇದ್ದ "ಅಲಲೊಮ" ಮಹರ್ಷಿಯಲ್ಲಿ ನಾಲ್ಕು ವರುಷಗಳ ಕಾಲ ವ್ಯಾಸಂಗ ಮಾಡಿ, "ಸ್ವರ್ಗಕ್ಕಿಂತಲೂ ಅತೀತವಾದದ್ದಾಗಿಯೂ, ಯಜ್ಞ ಯಾಗಾದಿಗಳನ್ನು ಅಪೇಕ್ಷಿಸದೇ ಇರುವದಾಗಿಯೂ, ಕ್ರಿಯಾದಿಗಳಿಗೆ ದೂರವಾಗಿಯೂ ಸಹಾ ಇರುವ ಸತ್ಯವನ್ನು ತಿಳಿದು, * ಕೊನೆಗೆ ತಾನೇ ಬುದ್ಧನಾದನು." ನಂತರ ಇವನ ಗುರುವು ಈತನನ್ನು ಬುದ್ಧನೆಂಬದಾಗಿ ಕರೆಯುತ್ತಾ, ಇವನಲ್ಲಿ ತುಂಬಾ ಭಕ್ತಿಯನ್ನು ಇಟ್ಟು, ನೀನೇ ನಮ್ಮ ಗುರುವಾಗಿರುವೆ. ನೀನು ಇಲ್ಲಿ ಇರುವುದಕ್ಕೆ ಬದಲಾಗಿ ಲೋಕದ ಅಜ್ಞಾನವನ್ನು ನಾಶಮಾಡುವ ಪ್ರಯತ್ನ ಮಾಡೆಂಬದಾಗಿ ಹೇಳಿ ಕಳುಹಿಸಿದನು. ನಂತರ ಬುದ್ಧನು ಅನೇಕ ಪ್ರದೇಶಗಳನ್ನು ಸಂಚಾರ ಮಾಡುತ್ತಾ "ಬಿಂಬಸಾರ" ರಾಜನ ರಾಜಧಾನಿಯಾದ "ರಾಜಗೃಹ" ವೆಂಬ ಪಟ್ಟಣದಲ್ಲಿ ಭಿಕ್ಷವನ್ನು ಒಂದು ತೆಂಗಿನ ಚಿಪ್ಪಿನ ಪಾತ್ರೆಯಲ್ಲಿ ಬೇಡಿ ಭಕ್ಷಿಸುತ್ತಾ ಇದ್ದನು. ಹೀಗಿದ್ದರೂ ಇವನ ತೇಜಸ್ಸು ಮಲಿನವಾಗಲಿಲ್ಲ. ಯೌವನವೂ,

ಸೌಂದರ್ಯವೂ, ನೈರ್ಮಲ್ಯವೂ, ವಿಶಾಲವಾದ ಯೋಗನೇತ್ರಗಳೂ, ಮತ್ತು ಈತನಲ್ಲಿ ಕಾಣಬರುವ ವೈರಾಗ್ಯ ಚಿಹ್ನೆಗಳಿಂದ ಆ ಪಟ್ಟಣದವರೆಲ್ಲಾ ಬೆರಗಾಗಿ ಇವನನ್ನೇ ಹಿಂಬಾಲಿಸುತ್ತಾ ಎಲ್ಲೆಲ್ಲಿಯೂ ಇವನ ಸಮಾಚಾರವೇ ಹರಡಿತು. ಈ ಗಲಭೆಗೆ ಕಾರಣವೇನೆಂದು ಆ ಪಟ್ಟಣದ ರಾಜನಾದ ಬಿಂಬಸಾರನು ದೂತರನ್ನು ಕೇಳಲು, ಆ ದೂತರು, ಮಹಾ ಪ್ರಭುವೇ! ಯಾವನೋ ಒಬ್ಬ ಸಾಕ್ಯವಂಶೋತ್ಪನ್ನನಾದ ರಾಜಪುತ್ರನು ಸಂಸಾರವನ್ನು ತ್ಯಜಿಸಿ, ವೈರಾಗ್ಯವನ್ನು ತಾಳಿ, ಸನ್ಯಾಸಿಯಾಗಿ, ನಾರಿಕೇಳ ಪಾತ್ರೆಯಲ್ಲಿ ಭಿಕ್ಷಾನ್ನವನ್ನು ಬೇಡಿ ಭಕ್ಷಿಸುತ್ತಾ ಇರುವನು. ಹೀಗೆಂದು ಹೇಳಲು ಬಿಂಬಸಾರನು ಬಹಳ ಮರುಕಪಟ್ಟು "ಸಾಕ್ಯಮುನಿಯನ್ನು" ನೋಡುವ ಉದ್ದಿಶ್ಯ ತನ್ನ ಮಂತ್ರಿಯಾದ "ಸದ್ಧರ್ಮನನ್ನು" ಕರೆದುಕೊಂಡು, ಅನೇಕ ಆಭರಣ ವಸನಾದಿಗಳ ಸಮೇತ ತೆರಳಿ, ನದೀತೀರದ ನಿರ್ಜನ ಪ್ರದೇಶದಲ್ಲಿ ತೆಂಗಿನ ಚಿಪ್ಪಿನಲ್ಲಿ ಭಿಕ್ಷಮುಖೇನ ತಂದ ಅನ್ನವನ್ನು ಭಕ್ಷಿಸುತ್ತಾ ಇರುವ ಬುದ್ಧನ ಸಮೀಪಕ್ಕೆ ಬಂದು, ಅವನ ಸೌಂದರ್ಯಕ್ಕೂ, ಅವನ ಯೌವನಕ್ಕೂ, ಅವನ ಜ್ಞಾನವರ್ಚಸ್ಸಿಗೂ ಸಹಾ ಬೆರಗಾಗಿ ಸಾಕ್ಯಮುನಿಯನ್ನು ಕುರಿತು—ಎಲೈ ನೀನು ರಾಜಪುತ್ರನು, ನಿನ್ನ ಬಾಹುಗಳು ರಾಜ್ಯವನ್ನಾಳಲು ಯೋಗ್ಯವಾದವುಗಳು. ಆದಕಾರಣ ನೀನು ಈ ರೀತಿ ಇರತಕ್ಕದ್ದು ಉಚಿತವಲ್ಲ. ಈ ದಿವ್ಯಾಂಬರಗಳನ್ನು ಧರಿಸು! ಬಾ, ನನ್ನ ರಾಜ್ಯವನ್ನು ನೀನೇ ಅನುಭವಿಸು ಎಂಬದಾಗಿ ಹೇಳಿದನು. ಈ ಮಾತನ್ನು ಕೇಳಿದ ಬುದ್ಧನು ಬಿಂಬಸಾರನನ್ನು ಕುರಿತು—ಎಲೈ ರಾಜನೇ? ವ್ಯಾಧಿಯಿಂದ ಸಂಕಟಪಡುತ್ತಾ ಇದ್ದ ಮನುಷ್ಯನಿಗೆ ವ್ಯಾಧಿ ನಿವಾರಣೆಯಾಗುವ ಔಷಧಕ್ಕೆ ಬದಲಾಗಿ ಮರಣದಾಯಕವಾದ ವಿಷವನ್ನು ಪಾನಮಾಡೆಂದು ಹೇಳಬಹುದೇ? ಮತ್ತು ಸರ್ಪನ ಬಾಯಿಗೆ ಸಿಕ್ಕಿ ತಪ್ಪಿಸಿಕೊಂಡಿದ್ದ ಮೊಲದ ಮರಿಯು ಪುನಃ ಸರ್ಪನ ಬಳಿಗೆ ಹೋಗುವುದೇ? ಮತ್ತು ಮನುಷ್ಯನು ತನ್ನ ಕೈಯನ್ನು ಸುಟ್ಟ ಪಂಜನ್ನು ಪುನಃ ಧರಿಸುವನೇ? ಅಥವಾ ಕುರುಡನಾಗಿದ್ದ ಮನುಷ್ಯನಿಗೆ ನೇತ್ರಗಳಲ್ಲಿ ದೃಷ್ಟಿಯುಂಟಾದ ಬಳಿಕ ಕಣ್ಣುಗಳು

ಇಂಗಿ ಹೋಗಲು ಬಯಸುವನೇ? ಅದರಂತೆ ಕ್ಷಣಿಕವಾದ ಸಕಲೈಶ್ವರ್ಯವನ್ನು, ರಾಜ್ಯವನ್ನು, ಮತ್ತು ಶಯನಾಗೃಹದಲ್ಲಿ ಇದ್ದ ಪತ್ನಿ ಪುತ್ರಾದಿಗಳನ್ನೆಲ್ಲಾ ತ್ಯಜಿಸಿ ಬಂದ ನನಗೆ, ಈ ನಶ್ವರವಾದ ಭೂಷಣಾದಿಗಳು, ಕ್ಷಣಿಕವಾದ ರಾಜ್ಯಭೋಗವೂ, ಮತ್ತು ರಾಜ್ಯವೂ ಬೇಕಾಗುವುದೇ? ಎಂದಿಗೂ ಇಲ್ಲ. ಪರಿಶುದ್ಧವಾದ ವೈರಾಗ್ಯವು ತ್ರಿಲೋಕಾಧಿಪತ್ಯಕ್ಕಿಂತಲೂ, ಮತ್ತು ಸ್ವರ್ಗಭೋಗಕ್ಕಿಂತಲೂ ಸಹಾ ಅತ್ಯುತ್ತಮವಾದುದಲ್ಲವೇ? ಆದಕಾರಣ ನನ್ನನ್ನು ಪುನಃ ಸಂಸಾರಕ್ಕೆ ಎಳೆಯಬೇಡ. ನೀನು ನಿನ್ನ ರಾಜ್ಯವನ್ನು ದೀರ್ಘಕಾಲ ಪಾಲಿಸು. ನಿನಗೆ ಸರ್ವಮಂಗಳವಾಗಲಿ. ನಿನ್ನ ಪರೋಪಕಾರ ಬುದ್ಧಿಗೆ ಮೆಚ್ಚಿದೆನು. ಎಂಬದಾಗಿ ಹೇಳಿದ ಮಾತುಗಳನ್ನು ಕೇಳಿದ "ಬಿಂಬಸಾರನು" ಮತ್ತು ಅವನ ಮಂತ್ರಿ "ಸದ್ಧರ್ಮ" ನೂ ಸಹಾ ಪರಮಾಶ್ಚರ್ಯಯುಕ್ತರಾಗಿ, ಅಹಾ! ಇಂಥಾ ಯೌವನಶಾಲಿಯಾದ ರಾಜಪುತ್ರನೇ ಸಕಲವನ್ನೂ ತ್ಯಜಿಸಿರುವ ಕಾಲದಲ್ಲಿ ನಮ್ಮಂಥಾ ವೃದ್ಧರು ಈ ರಾಜ್ಯಮೋಹಗಳನ್ನು ಕಟ್ಟಿಕೊಂಡಿರುವುದು ಉಚಿತವಲ್ಲವೆಂದು ಇವರೂ ವೈರಾಗ್ಯವನ್ನು ತಾಳಿ ಬುದ್ಧನ ಶಿಷ್ಯರಾದರು. ನಂತರ ಬುದ್ಧನು ದೇಶ ದೇಶಗಳಲ್ಲಿ ಸತ್ಯಮತವನ್ನು ಬೋಧಿಸುತ್ತಾ, ಸಾವಿರಾರು ಶಿಷ್ಯರನ್ನು ಮಾಡಿಕೊಂಡು ಪ್ರಪಂಚದ ಅಜ್ಞಾನವನ್ನೆಲ್ಲಾ ನಾಶಪಡಿಸುತ್ತಾ ಬಂದನು. ಹೀಗೆಯೇ ಬುದ್ಧನು ಸಂಚಾರ ಮಾಡುತ್ತಾ ಇರುವಾಗ್ಯೆ "ಪಂಚಭಿಕ್ಷು" ಗಳೆಂಬ ಐದು ಜನ ಬ್ರಾಹ್ಮಣರು ಈ ಬುದ್ಧನನ್ನು ವಾದದಿಂದ ಗೆಲ್ಲುತ್ತೇವೆಂದು ಯೋಚಿಸಿ, ಬುದ್ಧನೊಡನೆ ವಾಗ್ವಾದವನ್ನು ಮಾಡಿ ಸೋತು ಕೊನೆಗೆ ಅವನಿಗೇ ಶಿಷ್ಯರಾದರು.

## ಬುದ್ಧನನ್ನು ಹುಡುಕುವಿಕೆ.

ಇತ್ತಲಾಗಿ ಬುದ್ಧನನ್ನು ಹುಡುಕುವುದಕ್ಕೆ ಹೊರಟಿದ್ದ ರಾಜಪುರೋಹಿತ ಮತ್ತು ಮಂತ್ರಿಯೂ ಸಹ ಚನ್ನನು ಹೇಳಿದ ಮಾರ್ಗವಾಗಿಯೇ ಪ್ರಯಾಣ ಮಾಡಿ, ಎಲ್ಲಿಯೂ ಕಾಣದೆ, ಮುಂದಕ್ಕೆ

ಅನೇಕ ದೂರ ಅತಿಕ್ರಮಿಸಿ ಬುದ್ಧನು ವಾಸಮಾಡಿಕೊಂಡಿದ್ದ ಯತ್ಯಾಶ್ರಮನ್ನು ಸೇರಿ ಅಲ್ಲಿದ್ದ ಬ್ರಹ್ಮಚಾರಿಗಳಿಂದ ಇವನ ವಿಷಯ ವನ್ನು ತಿಳಿದು ಅವರುಗಳ ಹೇಳಿಕೆಯಂತೆಯೇ ಪಿಂಡಪರ್ವತಕ್ಕೆ ಬಂದು ಬುದ್ಧನ ಗುರುವಾಗಿದ್ದ ಅಲಲೋಮ ಮಹರ್ಷಿಯನ್ನು ಕೇಳ ಲು ಸಿದ್ಧಾರ್ಥನು ನನ್ನಲ್ಲಿ ಸತ್ಯತ್ವವನ್ನು ತಿಳಿದು ಬುದ್ಧತ್ವವನ್ನು ಹೊಂದಿ ಪ್ರಪಂಚದ ಅಜ್ಞಾನವನ್ನು ನಿವಾರಣೆ ಮಾಡುವ ಉದ್ದಿಶ್ಯ ಹೊರಟುಹೋದನೆಂದು ಹೇಳಿದನು. ನಂತರ ಇವರು ತಮ್ಮ ಕಾರ್ಯ ವು ಕೈಗೂಡದ್ದರಿಂದ ಖಿನ್ನರಾಗಿ, ಗಂಗಾ ನದಿಯ ದಡದಲ್ಲಿಯೇ ಅನೇಕ ದೂರ ಹುಡುಕುತ್ತಾ ಹೊರಟರು. ಆ ಕಾಲಕ್ಕೆ ಬುದ್ಧನು "ಅರಾದ" ಋಷಿಯ ಆಶ್ರಮದಲ್ಲಿ ಯೋಗಾನಂದವನ್ನು ಅನುಭವಿತ್ತಾ ಇದ್ದನು. ಹೀಗಿರುವಲ್ಲಿ ರಾಜಪುರೋಹಿತ ಮತ್ತು ಮಂತ್ರಿಗಳು ಹಾಗೆಯೇ ಹುಡುಕುತ್ತಾ "ಅರಾದ"ನ ಆಶ್ರಮಕ್ಕೆ ಬಂದು ನಮ್ಮ ರಾಜಪುತ್ರನು ಬಂದಿರುವನೇ ಎಂದು ಆ ಋಷಿಯನ್ನು ಕೇಳಲು, ನಾನು ನಿಮ್ಮ ರಾಜ ಪುತ್ರನನ್ನು ಕಾಣೆನು, ನಮ್ಮ ಆಶ್ರಮದ ನದಿಯ ಸೋಪಾನದಲ್ಲಿ ಮಾತ್ರ ಯಾವನೋ ಒಬ್ಬ ಬೋಧಿಸತ್ವನು ತಪವಂಗೈಯುತ್ತಿರುವ ನು ಎಂದು ಹೇಳಿದನು. ಇದನ್ನು ಕೇಳಿ ಇವರಿಬ್ಬರೂ ಆ ಸ್ಥಳಕ್ಕೆ ಬಂದು, ಕಾಷಾಯ ವಸ್ತ್ರಧಾರಿಯಾಗಿಯೂ ಮುಂಡನ ಮಾಡಲ್ಪಟ್ಟ ಶಿಖಾ ಉಳ್ಳವನಾಗಿಯೂ, ಕೃಶನಾಗಿಯೂ, ಸಹಾ ಇರುವ ಬದ್ಧನನ್ನು ನೋಡಿ ಇವನು ನಮ್ಮ ರಾಜಪುತ್ರನಲ್ಲವೆಂದು ಪರಸ್ಪರ ಮಾತನಾ ಡಿಕೊಳ್ಳುತ್ತಾ ಇದ್ದರು. ಆ ಕಾಲಕ್ಕೆ ಸರಿಯಾಗಿ ಬುದ್ಧನು ಸಮಾಧಿಯಿಂದ ಬಹಿರ್ಮುಖನಾಗಿ, ಇವರುಗಳನ್ನು ನೋಡಿ ಇದೇನೈ ವಿಜಯನೆ? ಆಸ್ಥಾನಪುರೋಹಿತರೊಡನೆ ಈ ಘೋರಾ ರಣ್ಯಕ್ಕೆ ಪ್ರವೇಶಮಾಡಿರುವೆ ಎಂದು ಕೇಳಿದನು. ನಂತರ ಮಂತ್ರಿ ಯು ಈ ಕಡೆಗೆ ತಿರುಗಿ ಇವನೇ ನಮ್ಮ ರಾಜಪುತ್ರನೆಂದು ಭಾವಿಸಿ ಭಯಭರಿತ ವಿಶ್ವಾಸದಿಂದ ವಂದನೆಯನ್ನುಮಾಡಿ, ಇವನ ಇರುವಿಕೆ ಯನ್ನು ನೋಡಿ, ದುಃಖಾಶ್ರುಗಳನ್ನು ಸುರಿಸುತ್ತಾ, ರಾಜಪುತ್ರನೇ ನಿನ್ನನ್ನು ನೋಡುವ ನನ್ನ ಕಂಗಳು ಇಂಗಿ ಹೋಗಬಾರದೇ!

ನೀನು ಪಡುತ್ತಾ ಇದ್ದ ಭೋಗವೇನು ? ಈಗ ನೀನು ಇರುವ ಕೃಪಣ
ತ್ವವೇನು ? ನಿನ್ನ ರಾಜತೇಜಸ್ಸೆಲ್ಲಾ ಮಾಯವಾಯಿತೇ ? ಎಂಬದಾಗಿ
ನಾನಾ ವಿಧದಿಂದ ರೋದಿಸಲು ಪ್ರಾರಂಭಿಸಿದ್ದನ್ನು ಕಂಡು, ರಾಜ
ಪುರೋಹಿತನು, ಮಂತ್ರಿಯನ್ನು ಸಮಾಧಾನಗೊಳಿಸಿದನು. ಇತ್ತಲಾ
ಗಿ ಬುದ್ಧನು ಈ ಮಂತ್ರಿಯ ರೋದನವು ಅಜ್ಞಾನದಿಂದುಂಟಾದ್ದೆಂ
ದು, ತಿಳಿದು ಮೌನದಲ್ಲಿಯೇ ಇದ್ದನು. ನಂತರ ರಾಜಪುರೋಹಿತನು
ಬುದ್ಧನನ್ನು ಕುರಿತು ಎಲೈ ರಾಜಪುತ್ರನೆ :—ನಿಮ್ಮ ತಂದೆಯು ಪುತ್ರ
ವಿಯೋಗವನ್ನು ಸಹಿಸಲಾರದೆ ಬಾಣಹತಿಯಿಂದ ನೊಂದ ಮೃಗದಂತೆ
ತಲ್ಲಣಿಸುತ್ತಾ ಇರುವನು. ಮತ್ತು ರಾಜ್ಯಭೋಗದಲ್ಲಿ ಮಮತೆ
ಯನ್ನು ಬಿಟ್ಟು ನಿನ್ನಂತೆಯೇ ಏಕಾಂಗಿಯಾಗಿ ಕುಳಿತು ನಿರಂತರ
ದಲ್ಲೂ ದುಃಖಾಶ್ರುಗಳನ್ನು ಸುರಿಸುತ್ತಲಿರುವನು. ಅಲ್ಲದೆ ಅನ್ನಾ
ದ್ಯಾಹಾರಗಳಲ್ಲೂ ಗಮನವಿಲ್ಲದೆ ಹುಚ್ಚು ಹಿಡಿದವನಂತೆ ನೆಲದ
ಧೂಳಿನಲ್ಲಿ ಒದ್ದಾಡುತ್ತಾ ಇರುವನು. ಇದರಿಂದ ರಾಜ್ಯವೆಲ್ಲಾ
ಅನಾಯಕವಾಗಿರುವದು. ಇದಲ್ಲದೆ ಪತಿವ್ರತಾಶಿರೋಮಣಿಯಾದ
ನಿನ್ನ ಪತ್ನಿಯ ದುಃಖವನ್ನು ವರ್ಣಿಸಲಸಾಧ್ಯವಾಗಿರುವುದು. ಆಕೆ
ಯು ನಿನ್ನ ಸನ್ನಿಧಿ ವಿಯೋಗವಾದ ದಿವಸ ಮೊದಲುಗೊಂಡು ಇದು
ವರಿವಿಗೂ ಸದಾ ದುಃಖಿಸುತ್ತಿರುವಳಲ್ಲದೆ ಸರ್ವೋಪಚಾರಗಳನ್ನೂ
ವರ್ಜಮಾಡಿ, ನಾರುಸೀರೆಯನ್ನು ಧರಿಸಿ ಕಂದಮೂಲಗಳನ್ನು ಭಕ್ಷಿ
ಸುತ್ತಾ, ಹಂಸತೂಲಿಕಾತಲ್ಪಶಯನಕ್ಕೆ ಬದಲಾಗಿ ಭೂತಲಶಯನವ
ನ್ನು ಮಾಡುತ್ತಾ ಇರುವದಲ್ಲದೆ ಪತಿಯನ್ನಗಲಿದ ಕಪೋತದಂತೆ ದೇಹ
ತ್ಯಾಗವನ್ನು ನಿರೀಕ್ಷಿಸುತ್ತಿರುವಳು. ಮತ್ತು ನಿನ್ನ ಬಂಧುಮಿತ್ರ
ರೆಲ್ಲಾ ಸೂರ್ಯನ ದರ್ಶನವನ್ನು ನಿರಂತರದಲ್ಲೂ ಅಪೇಕ್ಷಿಸುವ
ಕಮಲಗಳಂತೆ ನಿನ್ನ ಆಗಮನವನ್ನೇ ಬಯಸುತ್ತಿರುವರು. ಆದ
ಪ್ರಯುಕ್ತ ನೀನು ನಮ್ಮ ಮಾತುಗಳನ್ನು ಅಂಗೀಕರಿಸಿ ನಮ್ಮೊಡನೆ
ರಾಜಧಾನಿಗೆ ಬಂದು ಶೋಕಶರಧಿಯಲ್ಲಿ ಮಗ್ನರಾಗಿರುವ ನಿನ್ನ
ತಂದೆತಾಯಿಗಳನ್ನೂ, ಪತಿಪಾರಾಯಣೆಯಾದ ನಿನ್ನ ಪತ್ನಿಯನ್ನೂ
ನಿನ್ನ ಬಂಧುಮಿತ್ರರನ್ನೂ ಸಹಾ ನಿನ್ನ ದರ್ಶನವೆಂಬ ಹಡಗಿನ ಸಹಾ

ಯದಿಂದ ಅವರನ್ನು ಪಾರುಗಾಣಿಸಿ ನಮ್ಮ ಮನಸ್ಸಂತೋಷವನ್ನುಂಟು
ಮಾಡು. ನೀನು ಹಾಗೆಮಾಡದೆ ಮೂರ್ಖತ್ವವನ್ನು ಧರಿಸಿದಲ್ಲಿ ನಿನ್ನ
ಧರ್ಮವನ್ನು ಮೀರಿದವನಾಗುವುದಲ್ಲದೆ ಅನೇಕ ಪಾಪಕ್ಕೆ ಗುರಿಯಾ
ಗುವೆ. ನಿಮ್ಮ ತಂದೆಯು ಮುಪ್ಪಿನಕಾಲದಲ್ಲಿ ನಿನ್ನಿಂದ ಸುಖವನ್ನು
ಹೊಂದುವೆನೆಂದು ಯೋಚಿಸಿದುದಕ್ಕೆ ಸುಖಕ್ಕೆ ಬದಲಾಗಿ ದುಃಖ
ವನ್ನುಂಟುಮಾಡಿದೆ. ಮತ್ತು ನಿನ್ನ ಪತ್ನಿಯು ಈ ಯೌವ್ವನಕಾಲ
ದಲ್ಲಿ ಪತಿಸಾನ್ನಿಧ್ಯಸಂತೋಷವನ್ನು ಪಡೆಯುವೆನೆಂದು ಯೋಚಿಸಿ
ದುದಕ್ಕೆ ಸಂತೋಷಕ್ಕೆ ಬದಲಾಗಿ ಮನೋರೋಗವನ್ನೂ ದಾರಿದ್ರ್ಯ
ವನ್ನೂ ಸಹಾ ಉಂಟುಮಾಡಿರುವೆ. ಈ ರೀತಿ ಅವರುಗಳನ್ನು
ಕಷ್ಟಕ್ಕೂ ವ್ಯಥೆಗೂ ಗುರಿಮಾಡಿರುವುದು ನಿನಗೆ ಕೇವಲ ಅಧರ್ಮ
ವು. ಅಲ್ಲದೆ ನೀನು ವೈರಾಗ್ಯವನ್ನು ಧರಿಸುವುದಕ್ಕೆ ಇದು ಸಕಾಲ
ವಲ್ಲವು. ಮತ್ತು ಗೃಹಸ್ಥಧರ್ಮದಲ್ಲಿ ನೀನು ಮಾಡಬೇಕಾದ
ಕರ್ತವ್ಯಗಳನ್ನು (ಯಜ್ಞಯಾಗಾದಿಗಳು) ಮಾಡದೆ ವೈರಾಗ್ಯವನ್ನು
ಧರಿಸಿದಲ್ಲಿ ಅದು ಎಂದಿಗೂ ಫಲಿಸಲಾರದು. ಇದರಿಂದ ನಿನಗೆ
ಉಭಯಭ್ರಷ್ಟತ್ವವು ಪ್ರಾಪ್ತವಾಗುವುದು. ಅಲ್ಲದೆ ಪೂರ್ವರಾಜರಾದ
ತ್ರೌಲೌಮ, ಅನೌಕೋಶ, ಪಕೋಪಲಾಯು, ಪಿಕಲೊನ್ನತಿ, ಇವರೇ
ಮುಂತಾದವರು ಜ್ಞಾನವನ್ನು ಸಂಪಾದಿಸುವ ಉದ್ದಿಶ್ಯ ರಾಜ್ಯಭಾರ
ವನ್ನೂ; ರತ್ನಮಾಲ್ಯಾಲಂಕಾರಗಳನ್ನೂ; ಪತ್ನಿಪುತ್ರಾದಿಗಳನ್ನೂ;
ಸ್ವಧರ್ಮವನ್ನೂ ಸಹಾ ಬಿಟ್ಟು ತಲೆಯನ್ನು ಮುಂಡನಮಾಡಿಕೊಂ
ಡು ಕಾಷಾಯವಸ್ತ್ರವನ್ನು ಧರಿಸಿ ದೇಹಶೋಷಣೆಮಾಡಿಕೊಂಡು,
ಕಾಡುಗಳಲ್ಲಿ ಅಲೆಯುತ್ತಾ ಇದ್ದರೇ? ಎಂದಿಗೂ ಇಲ್ಲ. ಅಲ್ಲದೆ
ನಮ್ಮಂಥಾ ವೈದಿಕರಾದ ವೃದ್ಧಬ್ರಾಹ್ಮಣರೇ ಆಶ್ರಮಧರ್ಮಗಳನ್ನು
ಅನುಸರಿಸುತ್ತಾ ಇರುವ ಕಾಲದಲ್ಲಿ ಕ್ಷತ್ರಿಯನಾಗಿಯೂ ಮತ್ತು
ಇನ್ನೂ ಬಾಲಕನಾಗಿರುವ ನಿನಗೆ ವೈರಾಗ್ಯವು ಅನುಚಿತವು. ಆದ
ಕಾರಣ ಈ ಭ್ರಾಂತಿಯನ್ನು ತ್ಯಜಿಸಿ ಪುನಃ ರಾಜ್ಯಕ್ಕೆ ಬಾ, ಒಂದು
ವೇಳೆ ನಿನಗೆ ಜ್ಞಾನಾಪೇಕ್ಷೆಯಿಂದ ಬುದ್ಧಿವಿಕಲ್ಪವಾಗಿದ್ದಲ್ಲಿ
ಮೋಹನಮಂತ್ರೋದಕವನ್ನು ನಿನ್ನ ತಲೆಯ ಮೇಲೆ ಪ್ರೋಕ್ಷಿಸಿ

ಪುನಃ ಸಂಸಾರದಲ್ಲಿ ಅಭಿಲಾಷೆಯುಂಟಾಗುವಂತೆ ಮಾಡುತ್ತೇವೆ ಎಂಬದಾಗಿ ಅನೇಕ ವಿಧವಾದ ಪ್ರಾಪಂಚಿಕ ನೀತಿಗಳಿಂದ ಇವನ ಜಿತಮನಸ್ಕತೆಯನ್ನು ಮುರಿದು ಪುನಹ ಸಂಸಾರಕ್ಕೆ ಎಳೆಯಬೇಕೆಂದು ಪ್ರಯತ್ನಮಾಡಿದರು.

## ಬುದ್ಧನ ನಿಶ್ಚಯಜ್ಞಾನ.

ಈ ಮೇಲೆ ಹೇಳಿದ ರಾಜಪುರೋಹಿತ್ಯನ ಪ್ರಾಪಂಚಿಕ ನೀತಿಗಳನ್ನು ಕೇಳಿದ ಬೋಧಿಸತ್ವನು (ಬುದ್ಧನು) ತಮ್ಮ ತಂದೆಗೂ, ತನ್ನ ಪತ್ನಿಗೂ, ಇತರ ಮಿತ್ರಬಾಂಧವರಿಗೂ ಸಹಾ ಉಂಟಾಗಿರುವ ದುಃಖವಿಷಯದಲ್ಲಿ ಮಹಾ ಕನಿಕರವನ್ನೂ ಮತ್ತು ಮಮತೆಯನ್ನೂ ಸಹಾ ತಾಳಿದನು. ನಂತರ ಈ ಮಮತೆಯು ಇವನ ಹೃದಯವನ್ನು ಛೇದಿಸುವದಕ್ಕೆ ಪ್ರಾರಂಭಿಸಲು, ಧೈರ್ಯವನ್ನು ತಾಳಿ ಎಚ್ಚತ್ತು ಯಾವ ಮಾತನ್ನೂ ಆಡದೆ ಹಾಗೆಯೇ ಒಂದು ಕ್ಷಣ ಜ್ಞಾನದೃಷ್ಟಿ (ಯೋಗದೃಷ್ಟಿ) ಯಿಂದ ಯೋಚಿಸಿ ಅನಂತರ ಕಣ್ತೆರದು ಆ ಪುರೋಹಿತನಿಗೆ ವಂದನೆಯನ್ನು ಮಾಡಿ, ಅವನಿಗೆ ಉತ್ತರವನ್ನು ಈ ರೀತಿ ಕೊಟ್ಟನು. "ಎಲೈ ಪುರೋಹಿತನೇ ನನ್ನ ತಂದೆಯಾದ ಶುದ್ಧೋದನನಿಗೂ ಮತ್ತು ನನ್ನ ಪತ್ನಿಯಾದ ಯಶೋದರೆಗೂ ಸಹಾ ನನ್ನ ವಿಷಯದಲ್ಲಿ ಇರುವ ಪೂರ್ಣವಾದ ಪ್ರೀತಿಯನ್ನು ಮತ್ತು ಮಮತೆಗಳನ್ನು ಸಹಾ ನಾನು ಚನ್ನಾಗಿ ಬಲ್ಲೆನು. ಅಲ್ಲದೆ ಅವರುಗಳ ವಿಷಯದಲ್ಲಿ ನನಗೆ ಇರುವ ಪ್ರೀತಿ ವಿಶ್ವಾಸಗಳನ್ನು ಅವರೂ ಸಹಾ ಚನ್ನಾಗಿ ಬಲ್ಲರು. ಈ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ನನಗೆ ಉಂಟಾದ ಜನನ, ರೋಗ, ವಾರ್ಧಿಕ್ಯ, ಮರಣ, ಮುಂತಾದ ಪ್ರಪಂಚಭೀತಿಗಳು, ಪುತ್ರನು ಪಿತೃವಿಷಯದಲ್ಲಿ ಮಾಡಬೇಕಾದ ಧರ್ಮವನ್ನು, ಮತ್ತು ಪತಿಯು ಪತ್ನಿಯವಿಷಯದಲ್ಲಿ ಮಾಡಬೇಕಾದ ಪ್ರಪಂಚಧರ್ಮಗಳನ್ನು ಸಹಾ ಅತಿಕ್ರಮಿಸುವಂತೆ ಮಾಡಿದ್ದಲ್ಲದೆ ಈ ಭೀತಿಯಿಂದ ತಪ್ಪಿಸಿಕೊಳ್ಳಬೇಕೆಂಬ ಪ್ರಯತ್ನವನ್ನೂ ಸಹಾ ಉಂಟುಮಾಡಿದವು. ಮತ್ತು ಈ ರೀತಿಯಾದ

ಪ್ರಪಂಚಪ್ರೀತಿಗಳೇ ನನ್ನನ್ನು ಬಹುಕಾಲದಿಂದ ಬಾಧಿಸುತ್ತಾ ಇದ್ದು, ಈಗಿನ ವೈರಾಗ್ಯವನ್ನು ಹೊಂದುವಂತೆಯೂ ಸಹಾ ಮಾಡಿದವು. ಆದರೆ ನನ್ನ ತಂದೆಯೂ ಮತ್ತು ನನ್ನ ಪತ್ನಿಯೂ ಸಹಾ ಪಡುತ್ತಾ ಇರುವ ದುಃಖವನ್ನು ಕೇಳಿದ್ದರಿಂದ ನನಗೂ ಅಪಾರವಾದ ಕನಿಕರವು ತಲದೋರುತ್ತಿರುವುದು. ಆದಾಗ್ಯೂ ಈ ಕನಿಕರವು ಸ್ವಪ್ನದಂತೆ ಆ ಕಾಲದಲ್ಲಿ ಮಾತ್ರಾ ಸತ್ಯದಂತೆ ತೋರಿ ಎರಡನೇ ಕ್ಷಣದಲ್ಲೇ ಸುಳ್ಳಾಗಿರುವದಾದ್ದರಿಂದ ಈ ಕನಿಕರವು ಶಾಶ್ವತವಲ್ಲವು. ಅದಲ್ಲದೆ ಈ ಕನಿಕರ ಮುಂತಾದ ಅಭಿಮಾನಗಳಿಗೆ ಆಧಾರವಾದ ಈ ಪ್ರಪಂಚವೇ ಕ್ಷಣಿಕವಾಗಿರುವದು. ಈ ಬಂಧುಸಮ್ಮಂಧವಾದ ಅಭಿಮಾನವು ನಿಶ್ಚಯಜ್ಞಾನವಿಲ್ಲದ್ದರಿಂದ ಉಂಟಾಗಿರುವುದು. ಈ ಬಾಂಧವಾಭಿಮಾನವು ಯಾವರೀತಿಯಲ್ಲಿ ಪರಿಣಮಿಸುವುದೆಂದರೆ :—
ಒಬ್ಬ ಮನುಷ್ಯನು ಒಂದು ಮಾರ್ಗದಲ್ಲಿ ಪ್ರಯಾಣಮಾಡುತ್ತಾ ಇರುವಲ್ಲಿ ಅಕಸ್ಮಾತ್ತಾಗಿ ಇನ್ನು ಕೆಲವು ಪ್ರಯಾಣಿಕರನ್ನು ಮಧ್ಯ ಮಾರ್ಗದಲ್ಲಿ ಸಂಧಿಸಿ ಒಂದು ಕ್ಷಣ ಅವರೊಡನೆ ವಿನೋದದಿಂದ ಪ್ರಯಾಣವನ್ನು ಬೆಳಸಿದನಂತರ ಎರಡನೇ ಕ್ಷಣದಲ್ಲಿ ಅವರವರ ಊರಿನ ಮಾರ್ಗಗಳನ್ನು ಕುರಿತು ಅವರವರು ಹೊರಟುಹೋದನಂತರ ತಾನು ಒಬ್ಬನೇ ಹ್ಯಾಗೆ ನಿಲ್ಲುತ್ತಾನೋ ಆದರಂತೆ ಮನುಷ್ಯನು ಈ ಭೂಮಿಯಲ್ಲಿ ಜನಿಸಿ ತನ್ನ ಜನ್ಮಯಾತ್ರೆಯನ್ನು ಕುರಿತು ಪ್ರಯಾಣಮಾಡುವ ದಾರಿಯಲ್ಲಿ ತಂದೆ, ತಾಯಿ ಪತ್ನಿ, ಪುತ್ರರೆಂಬ ಕ್ಷಣಿಕಮಿತ್ರರು ಇವನ ಅಭಿಮಾನಿಗಳಾಗಿದ್ದು ಕಾಲಾನುಗತಿಯಿಂದ ತಮ್ಮ ತಮ್ಮ ಕರ್ಮಕ್ಕೆ ಅನುಸಾರವಾದ ಗತಿಗಳನ್ನು ಹೊಂದಿ ತಮ್ಮ ತಮ್ಮ ಮಾರ್ಗಗಳನ್ನು ಕುರಿತು ಹೊರಟುಹೋದನಂತರ ಇವನ ಕರ್ಮಕ್ಕನುಸಾರವಾದ ಗತಿಗೆ ಇವನೂ ಹೋಗುತ್ತಾನೆ. ಆದಕಾರಣ ಇದನ್ನು ತಿಳಿದ ಮೇಲೆ ಈ ಕ್ಷಣಿಕವಾದ ಬಾಂಧವಾಭಿಮಾನವನ್ನು ಕುರಿತು ದುಃಖಿಸುವುದು ಅವಿವೇಕವಲ್ಲವೆ? ಅಲ್ಲದೆ ಇದೇ ರೀತಿಯಲ್ಲಿ ಅನೇಕ ಜನ್ಮಗಳನ್ನು ಅನುಭವಿಸಿ ಅಭಿಮಾನದ ಕ್ಷಣಿಕತ್ವವನ್ನು ತಿಳಿದಿದ್ದಾಗ್ಯೂ ಎಚ್ಚರಗೊಳ್ಳದೆ ಅಸಂಖ್ಯಾತ

ವಾದ ಮೃತ್ಯುಪರಂಪರೆಗಳನ್ನು ಹೊಂದುವದು ಪ್ರಾಜ್ಞಜನರ ಲಕ್ಷಣವೆ? ಮತ್ತು ಈ ದೃಗ್ಗೋಚರಗಳಾದ ವನ, ಪರ್ವತ, ಸಮುದ್ರ, ಮುಂತಾದ ಚಿರವಸ್ತುಗಳೇ ಕಾಲಾಧೀನವಾಗಿ ನಾಶ ಹೊಂದುವ ಕಾಲದಲ್ಲಿ ಈ ಕ್ಷಣಭಂಗುರವಾದ ದೇಹದಲ್ಲಿ ಅಭಿಮಾನವಿಡಬಹುದೇ? ಆದಕಾರಣ ಈ ಕ್ಷಣಿಕವಾದ ಸಂಸಾರಾಭಿಮಾನವನ್ನು ಧೈರ್ಯದಿಂದ ಛೇದಿಸಿದಲ್ಲಿ ಜನನಮರಣಗಳಿಗೆ ಕಾರಣವಾದ ಕಾಲವು ತಾನಾಗಿಯೇ ನಾಶವಾಗುವುದಲ್ಲದೆ ನಿರಂತರವಾದ ಶಾಂತತೆಯನ್ನು ಪಡೆಯಬಹುದು. ಆದಪ್ರಯುಕ್ತ ನಾನು ನನ್ನ ತಂದೆ ಮತ್ತು ಪತ್ನಿಪುತ್ರರ ವಿಷಯದಲ್ಲೂ, ಮತ್ತು ಅವರುಗಳು ನನ್ನ ವಿಷಯದಲ್ಲೂ ದುಃಖಿಸುವುದು ಕೇವಲ ಅಜ್ಞಾನವು." ಎಂಬದಾಗಿ ಹೇಳಿದ್ದಲ್ಲದೆ ಪುನಃ ಮಂತ್ರಿಯನ್ನು ಕುರಿತು :—

ಎಲೈ ಮಂತ್ರಿ ಪುರೋಹಿತರೇ? ನೀವು ನನ್ನನ್ನು ಕರೆದುಕೊಂಡುಹೋಗಿ ಪುನಹಾ ರಾಜನನ್ನಾಗಿ ಮಾಡುವದಲ್ಲದೆ ಯಜ್ಞಯಾಗಾದಿ ಕರ್ಮಗಳನ್ನು ನನ್ನಿಂದ ಮಾಡಿಸಿ ಮುಂದಕ್ಕೆ ಈ ರಾಜಪದವಿಗಿಂತ ಅತಿಶಯವಾದ ಸ್ವರ್ಗಪದವಿಯನ್ನುಂಟುಮಾಡುತ್ತೇವೆಂದು ಹೇಳಿದಿರಿ; ಇದನ್ನು ಕೇಳಿ ನನಗೆ ತುಂಬಾ ಕೌತುಕ ಉಂಟಾಗುವುದು. ಯಾತಕ್ಕೆಂದರೆ ಈ ರಾಜ್ಯಭೋಗವನ್ನು ಈಗ ಇಚ್ಛಿಸಿ ಮುಂದಕ್ಕೆ ಸ್ವರ್ಗಭೋಗವನ್ನೂ ಸಹಾ ಅನುಭವಿಸಿದಾಗ್ಯೂ, ಆ ಭೋಗವು ತೀರಿದ ಮರುದಿವಸವೇ ಆ ಆಶಾಮಯವಾದ ಸ್ವರ್ಗದಿಂದ ಪಾತಾಳಕ್ಕೆ ಬಿದ್ದು ಅಧೋಗತಿಗೆ ಪ್ರಾಪ್ತನಾಗಿ ದುಃಖವನ್ನು ಅಪರಿಮಿತವಾಗಿ ಹೊಂದಬೇಕಾಗುವದೆಂಬುವದನ್ನು ನೀವು ಯೋಚಿಸಲಿಲ್ಲವೆಂಬುವದಕ್ಕೆ ಆಶ್ಚರ್ಯ ಉಂಟಾಗುತ್ತಿರುವುದು. ಆದಕಾರಣ ನಾನು ಎಂದಿಗೂ ಅಭಿಮಾನಕ್ಕೆ ವಳಗಾಗಲಾರೆನು. ಆದರೆ ಲೋಕದಲ್ಲಿ ಅಜ್ಞಾನಿಗಳು ಮೇಲೆ ಕಾಣಬರುವ ಆಕಾರ ಸೌಂದರ್ಯಕ್ಕೆ ಮೋಹಿತರಾಗಿ ಆ ಆಕಾರದೊಳಗೆ ಅಡಗಿರುವ ಸದ್ವಸ್ತುವನ್ನು ಮರೆತುಬಿಡುತ್ತಾರೆ. ಆದ್ದರಿಂದ ಜೇನು ಹುಳುವು ಪುಷ್ಪದಲ್ಲಿ ಅಡಗಿರುವ ಮಕರಂದವನ್ನುಕಂಡು ಹಿಡಿದ ನಂತರ ಪುಷ್ಪದ ರೂಪ ಪರಿಮಳಗಳನ್ನು ತ್ಯಾಗಬಯಸುವದಿಲ್ಲ

ವೊ, ಅದರಂತೆ ಶಾಶ್ವಿತವಸ್ತುವಿನಲ್ಲಿ ಗಮನವಿರುವವನಿಗೆ ನಿಮ್ಮ ರಾಜ್ಯ ಭಾರವೇ ಆಗಲಿ, ಅಥವ ಯಜ್ಞಯಾಗಾದಿಗಳೇ ಆಗಲಿ, ಅಲ್ಲದೆ ಬಾಂಧವಾಭಿಮಾನ ಮುಂತಾದವು ಎಂದಿಗೂ ರುಚಿಸಲಾರವು. ಅಲ್ಲದೆ ಲೋಕದಲ್ಲಿ ಸಮಸ್ತ ವಸ್ತುಗಳಿಗೂ ಭಯವುಂಟು, ಆದರೆ ವೈರಾಗ್ಯವುಳ್ಳವನಿಗೆ ಯಾವ ಭಯವೂ ಇಲ್ಲಾ. ವೈರಾಗ್ಯವು ಸಮಸ್ತ ಭೋಗಗಳಿಗಿಂತಲೂ, ಸಮಸ್ತ ಸುಖಗಳಿಗಿಂತಲೂ, ಸಮಸ್ತ ರುಚಿಗಿಂತಲೂ, ಸಮಸ್ತ ಐಶ್ವರ್ಯಗಳಿಗಿಂತಲೂ ಅತ್ಯುತ್ತಮವಾಗಿರುವುದರಿಂದ ವೈರಾಗ್ಯಯುಕ್ತವಾದ ಈ ಭಿಕ್ಷಾಟನೆಯನ್ನೇ ಲೋಕದ ಸಮಸ್ತಲಾಭಗಳೆಂದು ಭಾವಿಸಿರುವೆನು. ಆದ್ದರಿಂದ ನೀವು ನನ್ನನ್ನು ಕಾಡಬೇಡಿ! ಎಂಬದಾಗಿ ಹೇಳಿದನು. ಇದನ್ನು ಕೇಳಿದ ಮಂತ್ರಿ ಪುರೋಹಿತರು ಇವನ ನಿಶ್ಚಯಜ್ಞಾನಕ್ಕೆ ಆಶ್ಚರ್ಯಪಟ್ಟು ತಲೆಗಳನ್ನು ನಾಚಿಕೆಯಿಂದ ಬಗ್ಗಿಸಿಕೊಂಡು ಪುನಹ ಬೋಧಿಸತ್ವನನ್ನು ಕುರಿತು :—ಎಲೈ ಮಹಾತ್ಮನೆ ನಿನ್ನ ಬೋಧೆಯನ್ನು ಕೇಳಿ ನಾವು ಕೃತಾರ್ಥರಾದೆವು. ನಾವುಗಳೂ ಇಲ್ಲಿಂದ ಮುಂದಕ್ಕೆ ನಿನ್ನ ಶಿಷ್ಯರಾಗಿರುವೆವು. ಆದಾಗ್ಯೂ ನಮ್ಮದೊಂದು ವಿಜ್ಞಾಪನೆಯನ್ನು ಲಾಲಿಸು! ನಿನ್ನನ್ನು ರಾಜ್ಯಭಾರಕ್ಕೂ ಅಥವಾ ಯಜ್ಞಯಾಗಗಳನ್ನು ಮಾಡಿಸುವದಕ್ಕೂ ಸಹಾ ಕರೆದುಕೊಂಡು ಹೋಗುವದಿಲ್ಲ. ಆದರೆ ನಿಮ್ಮ ತಂದೆಯು ಪುತ್ರಮೋಹವೆಂಬ ಅಜ್ಞಾನದಲ್ಲಿ ಸಿಲುಕಿ ಕೃಶನಾಗಿ ಗತಜೀವನಾಗುವ ಸ್ಥಿತಿಯಲ್ಲಿರುವನು ನೀನು ಅಲ್ಲಿಗೆ ದಯಮಾಡಿಸಿ ಈಗ ನಮಗೆ ಅಜ್ಞಾನವನ್ನು ನಾಶಪಡಿಸಿದಂತೆ ಅವನ ಅಜ್ಞಾನವನ್ನೂ ನಾಶಪಡಿದಲ್ಲಿ ನಮ್ಮ ಶ್ರಮವು ಸಾರ್ಥಕವಾಗುವುದಲ್ಲದೆ ನಿಮ್ಮ ತಂದೆಗೂ ನಿರಂತರಾನಂದ ಉಂಟಾಗಿ ಅದರಿಂದ ನಿನಗೆ ಸುಪುತ್ರಧರ್ಮಫಲವು ಸಹಾ ಪ್ರಾಪ್ತವಾಗುವುದೆಂದು ಪ್ರಾರ್ಥಿಸಲು ಬುದ್ಧನು ನಸುನಕ್ಕು, ತಾನು ಬರುವದಾಗಿ ವಾಗ್ದಾನ ಮಾಡಿ ಇವರುಗಳನ್ನು ಮುಂಚಿತವಾಗಿಯೇ ಹೋಗುವಂತೆ ಹೇಳಲು ಈ ಪುರೋಹಿತ ಮಂತ್ರಿಗಳಿಬ್ಬರೂ ಪುನಃ ತಮ್ಮ ಪಟ್ಟಣವನ್ನು ಸೇರಿ ಇಲ್ಲಿ ನಡೆದ ಸಮಾಚಾರವನ್ನೆಲ್ಲಾ ಶುದ್ಧೋದನನಿಗೆ ತಿಳುಹಿಸಿದರು.

## ಬುದ್ಧನು ತಂದೆಯ ಬಳಿಗೆ ಬಂದದ್ದು.

ಇದನ್ನು ಕೇಳಿದ ಶುದ್ಧೋದನನು ಪರಮಾನಂದಭರಿತನಾಗಿ ಮೇಘಸಮಾಗಮನದಿಂದ ಅಭಿನಂದಿಸುವ ಮಯೂರನಂತಾದನು. ನಂತರ ಧೊರೆಯು ಪುತ್ರನು ಬರುವ ಸಂತೋಷಾರ್ಥವಾಗಿ ಪಟ್ಟಣವನ್ನೆಲ್ಲಾ ಶೃಂಗರಿಸುವಂತೆ ಆಜ್ಞೆ ಮಾಡಿದನು. ಮತ್ತು ತನ್ನ ಪ್ರಿಯ ಪುತ್ರನು ಬರುವ ದಾರಿಯಲ್ಲಿ ಅನೇಕ ಉಪಚಾರಮಂದಿರ (ಅರವಟ್ಟಿಗೆ) ಗಳನ್ನು ವಿರಚಿಸಿದನು. ಇಷ್ಟರಲ್ಲಿಯೇ ರಾಜಪುರೋಹಿತನು ಯಶೋದರೆಯ ಬಳಿಗೆ ಬಂದು ಎಲೈ ಮಾತೆಯೇ! ನಿನ್ನ ಮನೋವಲ್ಲಭನು ಇಲ್ಲಿಗೆ ಪುನಃ ಬರುವಂತೆ ಅಪ್ಪಣೆ ಕೊಟ್ಟಿರುವನು. ನೀನು ಈ ರೀತಿಯಲ್ಲಿರತಕ್ಕದ್ದು ಸರಿಯಲ್ಲ. ದಿವ್ಯರತ್ನಮಾಲ್ಯಾಭರಣಗಳಿಂದ ಅಲಂಕೃತಳಾಗಿ ಅವನ ಮನಸ್ಸನ್ನು ಸಂತೋಷಪಡಿಸಿ ಅವನನ್ನು ಇಲ್ಲಿಯೇ ನೆಲೆಯಾಗಿ ನಿಲ್ಲುವಂತೆ ಮಾಡು. ಎಂಬ ಪುರೋಹಿತನ ಮಾತುಗಳನ್ನು ಕೇಳಿದ ಯಶೋದರೆಯು ಅವನನ್ನು ಕುರಿತು—ನನ್ನ ಜೀವನನು (ಗಂಡನು) ಯಾವ ರೀತಿಯಲ್ಲಿ ಇರುವನು? ಅವನು ಎಲ್ಲಿ ಇರುವನು? ದಯವಿಟ್ಟು ಹೇಳಿ ನನ್ನ ಬೆಂದೊಡಲನ್ನು ಶಾಂತಿಗೊಳಿಸೆಂದು ಪ್ರಾರ್ಥಿಸಿದಳು. ಇವಳ ಪ್ರಶ್ನೆಗೆ ಪುರೋಹಿತನು ಎಲೈ ಮಾತೆಯೇ! ನಿನ್ನ ವಲ್ಲಭನು ರಾಜ್ಯಮೋಹವನ್ನೂ, ಪ್ರಪಂಚ ಭೋಗವನ್ನೂ ಸಹಾ ತ್ಯಜಿಸಿ ಅನ್ನಾದ್ಯಾಹಾರಗಳಲ್ಲಿ ಗಮನವಿಲ್ಲದೆ ಇರುವುದಲ್ಲದೆ ಮುಂಡನಕಾಷಾಯವಸ್ತ್ರವನ್ನು ಧರಿಸಿ, ಭಿಕ್ಷುಕನಾಗಿರುವನೆಂದು ಹೇಳಿ ತನ್ನ ಕಾರ್ಯಗೌರವವನ್ನು ಕುರಿತು ತೆರಳಿದನು. ಈ ಮಾತುಗಳನ್ನು ಕೇಳಿದ ಯಶೋದರೆಯು ತನ್ನ ಪತಿಯಂತೆಯೇ ನಿರಾಹಾರಿಯಾಗಿಯೂ, ಭೂತಲಶಯನಳಾಗಿಯೂ, ನಿರಾಭರಣಶೋಭಿತಳಾಗಿಯೂ, ಸಹಾ ಇದ್ದಾಗ್ಯೂ, ಪತಿಯು ಮುಂಡನಕಾಷಾಯವಸ್ತ್ರವನ್ನು ಧರಿಸಿರುವುದನ್ನರಿತು, ತನ್ನಲ್ಲಿ ತಾನೇ ಯೋಚಿಸಿದ್ದೇನೆಂದರೆ—ಲೋಕದಲ್ಲಿ ಸ್ತ್ರೀಗೆ ಪತಿಯೇ ಪರದೈವನಾಗಿರುವದ್ದರಿಂದ ಸ್ತ್ರೀಯು ಪತಿಯನ್ನು ಛಾಯವು ದೇಹವನ್ನು ಅನುಸರಿಸುವಂತೆ

ಅನುಸರಿಸಬೇಕಾದ್ದರಿಂದ ನಾನು ಪುರೋಹಿತನ ಮಾತಿನಂತೆ ಆಭರಣಾದಿಗಳಿಂದ ಎಂದಿಗೂ ಅಲಂಕೃತಳಾಗುವದಿಲ್ಲ. ಇದಕ್ಕೆ ಬದಲಾಗಿ ನನ್ನ ಪತಿಯ ಆಚರಣೆಯೇ ನನಗೆ ಸರ್ವೋತ್ತಮವೆಂದು ಭಾವಿಸಿ ತಾನೂ ಮುಂಡನಕಾಷಾಯ ವಸ್ತ್ರವನ್ನು ಧರಿಸುವುದೇ ಯುಕ್ತವೆಂದು ಯೋಚಿಸಿ ತನ್ನ ಪತಿಯಂತೆಯೇ ಮುಂಡನವನ್ನು ಮಾಡಿಸಿಕೊಂಡು ಕಾಷಾಯ ವಸ್ತ್ರವನ್ನು ಧರಿಸಿ, ಆತನ ಆಗಮನವನ್ನೇ ನಿರೀಕ್ಷಿಸುತ್ತಾ ಇದ್ದಳು. ಇತ್ತಲಾಗಿ ಬುದ್ಧನು ತನ್ನ ಅಸಂಖ್ಯಾತ ಶಿಷ್ಯರನ್ನು ಸೇರಿ ಅವರೊಡನೆ ತನ್ನ ತಂದೆಯ ಬಳಿಗೆ ಹೊರಡಲುದ್ಯುಕ್ತನಾಗಿ ಹಾಗೆಯೇ ಮಾರ್ಗದಲ್ಲಿ ಮನ್ಮಥ (ಮಾರ) ನಿಂದ ಉಂಟುಮಾಡಲ್ಪಟ್ಟ ಮನೋವಿಕಲ್ಪಗಳನ್ನೆಲ್ಲಾ ಮನೋನಿಗ್ರಹದಿಂದ ಭೇದಿಸಿ ಮನ್ಮಥನನ್ನು ಸೋಲಿಸಿ ಮಾರಜಿತ್ ಎಂಬ ಪ್ರಖ್ಯಾತಿಯನ್ನು ಹೊಂದಿದನು. ಹೀಗೆಯೇ ಇನ್ನೂ ಕೆಲವು ದೂರ ಪ್ರಯಾಣ ಮಾಡಿ ಬರುತ್ತಾ ಇರುವ ದಾರಿಯಲ್ಲಿ ಒಂದು ಸಣ್ಣ ಗ್ರಾಮವನ್ನು ಕಂಡು, ಅಲ್ಲಿ ನೀರು ಸೇದುತ್ತಿದ್ದ ಒಬ್ಬ ಬಾಲಕಿಯನ್ನು ಬಾಯಾರಿಕೆಯಿಂದ ನೀರು ಕೊಡೆಂದು ಬೇಡಿದನು. ಆ ಕನ್ಯೆಯು ಕೈತಕ (ಮಾದಿಗ) ವಂಶಜೆಯಾದ್ದರಿಂದ ಈ ಯತಿರೂಪನಾದ ಬುದ್ಧನನ್ನು ಕಂಡು ಭಯಪಟ್ಟು ಸ್ವಾಮಿ, ನಾನು ಮಾದಿಗ ವಂಶವೆಂಬ ಕಶ್ಮಲದಲ್ಲಿ ಜನಿಸಿರುವೆನಾದ್ದರಿಂದ ತಮ್ಮ ಪಿಪಾಸವನ್ನು ನಿವಾರಣೆಮಾಡುವ ಪುಣ್ಯವು ನನಗೆ ಲಭಿಸಲಿಲ್ಲವೆಂದು ಬಹಳ ವಿಷಾದದಿಂದ ಹೇಳಿದಳು. ಈ ಮಾತನ್ನು ಕೇಳಿದ ಬುದ್ಧನು, ಆ ಮಾದಿಗರವಳ ಸತ್ಯತೆಗೂ, ದಯೆಗೂ, ಧರ್ಮಬುದ್ಧಿಗೂ, ಅವಳ ಪಶ್ಚಾತ್ತಾಪಕ್ಕೂ ಸಹಾ ಪರಮಾನಂದಭರಿತನಾಗಿ, ಎಲೈ ಮಗಳೇ ! ಮಾಣಿಕ್ಯವು ಮಲಿನ ವಸ್ತ್ರದಲ್ಲಿ ಬಂಧಿಸಿದ್ದರಿಂದ ಅದರ ಯೋಗ್ಯತೆಯೂ ಮತ್ತು ಪ್ರಕಾಶವು ಕುಂದಾಗುವದೇ ? ಎಂದಿಗೂ ಇಲ್ಲಾ. ಅದರಂತೆ ನೀನು ಕೈತಕಕನ್ಯೆ (ಮಾದಿಗರವಳು) ಎಂಬ ದೋಷಕ್ಕೆ ಒಳಗಾಗಿರುವೆನೆಂದು ಎಣಿಸಬೇಡ ; ನಿನ್ನಲ್ಲಿ ಅಡಗಿರುವ ಸದ್ಗುಣಗಳಿಂದ ನೀನು ಸರ್ವೋತ್ತಮಳಾಗಿರುವೆ ; ಲೋಕದಲ್ಲಿ ಸತ್ಯತೆ, ಧರ್ಮಬುದ್ಧಿ, ದಯ, ಪಶ್ಚಾ

ತ್ತಾಪ ಮುಂತಾದ ಸದ್ಗುಣಗಳು ಯಾವ ಮನುಷ್ಯನಲ್ಲಿ ಇಲ್ಲದಿರುವುದೋ, ಅವನು ಸದ್ವಂಶದಲ್ಲಿ ಜನಿಸಿದವನಾದಾಗ್ಯೂ ಸಮುದ್ರದಲ್ಲಿ ಹುಟ್ಟಿದ ವಿಷವಂತೆ ನೀಚನು ಮತ್ತು ಭಯಂಕರನು. ಅಲ್ಲದೆ ಮೇಲೆ ಹೇಳಿದ ಸದ್ಗುಣಗಳು ಯಾವನಲ್ಲಿ ಭರಿತವಾಗಿರುವುದೋ ಅವನು ನೀಚವಂಶದಲ್ಲಿ ಜನಿಸಿದಾಗ್ಯೂ, ಕೆಸರಿನಲ್ಲಿ ಬೆಳೆದಾಗ್ಯೂ ತಾವರೆಯು ಹ್ಯಾಗೆ ಪೂಜಾರ್ಹವೋ ಅದರಂತೆ ಅವನೇ ಸದ್ವಂಶೋತ್ಪನ್ನನು. ಅವನೇ ಸರ್ವೋತ್ತಮನು. ಎಂದು ಹೇಳಿ ಆಕೆಯಿಂದ ಸ್ವಲ್ಪವೂ ಜಿಗುಪ್ಸೆಹೊಂದದೆ ವಿಮಲೋದಕವನ್ನು ಪಾನಮಾಡಿ ಆಕೆಗೆ ವಂದನೆಯನ್ನು ಮಾಡಿ ಮುಂದಕ್ಕೆ ಪ್ರಯಾಣಮಾಡಿದನು. ಈ ಬುದ್ಧನ ಮಾತನ್ನು ಕೇಳಿದ ಆ ಕೈತಕ ಕನ್ಯೆಯು, ಇವನ ಅಭೇದ ಜ್ಞಾನಕ್ಕೆ ಬೆರಗಾಗಿ ತಾನೂ ವೈರಾಗ್ಯವನ್ನು ಧರಿಸಿ, ಸಂಸಾರವನ್ನು ವರ್ಜಿಸಿ ಭಿಕ್ಷುಕಳಾಗಿ ಬುದ್ಧನನ್ನು ಹುಡುಕುತ್ತಾ ಹೊರಟಳು. ಇತ್ತಲಾ ಬುದ್ಧನು ಕಪಿಲವಸ್ತುವಿನ ಸಮೀಪಕ್ಕೆ ಬರಲು ಅಲ್ಲಿಯೇ ರಾಜನಿಂದ ಆ ಜ್ಞಪ್ತರಾದ ಅಧಿಕಾರಿಗಳು ಬುದ್ಧನನ್ನು ಬಹು ಮರ್ಯಾದೆಯಿಂದ ಎದುರುಗೊಂಡು, ತಕ್ಷಣ ಬುದ್ಧನು ಬರುತ್ತಾ ಇರುವ ವರ್ತಮಾನವನ್ನು ಶುದ್ಧೋದನನಿಗೆ ಹೇಳಿ ಕಳುಹಿಸಿದರು. ಈ ಸಮಾಚಾರವನ್ನು ತಿಳಿದ ಧೊರೆಯು, ಸಮಾಚಾರ ಹೇಳಿದ ದೂತರಿಗೆ ಉಡುಗೆರೆ ಬಹುಮಾನಗಳನ್ನು ಕೊಟ್ಟು ಪರಮಾನಂದಭರಿತನಾಗಿ ಮಗನನ್ನು ಎದುರುಗೊಳ್ಳಲು, ತಾನಾಗಿಯೇ ಹೊರಟನು. ನಂತರ ಧೊರೆಯೊಡನೆ ಸಮಸ್ತ ಮಂತ್ರಿಪುರೋಹಿತರು, ಸೇನಾಪತಿ ಮುಂತಾದ ಸಮಸ್ತ ಅಧಿಕಾರಿಗಳೂ ಹೊರಟು ಅತಿಸಂಭ್ರಮದಿಂದ ಪ್ರಯಾಣಮಾಡಿದರು. ಈ ರೀತಿಯಾಗಿ ಸಕಲ ಪರಿಜನ ಸಹಿತನಾದ ಧೊರೆಯು ದೂರದಲ್ಲಿಯೇ ಬುದ್ಧನನ್ನು ಕಂಡು ಪರಮಾನಂದಭರಿತನಾಗಿ ಆತುರದಿಂದ ಬುದ್ಧನ ಬಳಿಗೆ ಹೋದನು. ಅನಂತರ ರಾಜನು ತನ್ನ ಪುತ್ರನು ಪೂರ್ವಕ್ಕಿಂತ ಮಹಾ ತೇಜಸ್ವಿಯಾಗಿಯೂ, ಮತ್ತು ಗಂಭೀರನಾಗಿಯೂ ಸಹ ಇರುವುದನ್ನು ನೋಡಿ ಆನಂದಭರಿತನಾದನು. ಅಲ್ಲದೆ ತನ್ನ ಪ್ರಿಯಪುತ್ರನು ಸನ್ಯಾಸಿಯಂತೆ ಮುಂಡನಕಾಷಾಯ ವಸ್ತ್ರ

ಯುಕ್ತನಾಗಿರುವುದನ್ನು ನೋಡಿ ಬಹಳ ಚಿಂತೆಯಿಂದ ಮರುಗಿದನು. ಮತ್ತು ರಾಜನು ತನ್ನಲ್ಲಿ ತಾನೇ ಯೋಚಿಸಿದ್ದೇನೆಂದರೆ—ನನ್ನ ಮಗನಾದರೋ ರಾಜ್ಯವನ್ನೂ ಸಂಸಾರವನ್ನೂ ಸಹ ತ್ಯಜಿಸಿ ಜ್ಞಾನವರ್ಚಸ್ಸಿನಿಂದ ಪ್ರಜ್ವಲಿಸುತ್ತಿರುವನು. ನಾನಾದರೋ ವೃದ್ಧನಾದಾಗ್ಯೂ ರಾಜ್ಯಮೋಹವನ್ನುಬಿಟ್ಟಿಲ್ಲವಲ್ಲಾ ಎಂಬದಾಗಿ ತನ್ನಲ್ಲಿ ತಾನೇ ನಾಚಿಕೆ ಪಟ್ಟು, ತನ್ನ ಮಗನಾಗಿದ್ದರೂ ಬುದ್ಧನು ಸನ್ಯಾಸಿಯಾಗಿರುವದ್ದರಿಂದ ಯಾವ ರೀತಿಯಲ್ಲಿ ಮಾತನಾಡಿಸಬೇಕೆಂಬ ಚಿಂತೆಯಿಂದ ಮರುಗಿ, ಬುದ್ಧನನ್ನು ಕುರಿತು ಈ ರೀತಿ ಹೇಳಿದನು—ಪ್ರಯಾಣ ಮಾಡುವ ಮನುಷ್ಯನು ಬಾಯಾರಿಕೆಯಿಂದ ತಡೆಯಲಾರದೆ ಸಂಕಟಪಡುತ್ತಿರುವಾಗ್ಯೆ ಆ ದಾರಿಯ ಪಾರ್ಶ್ವದಲ್ಲಿಯೇ ಒಂದು ಜಲಾಶಯವನ್ನು ಕಂಡು ಪರಮಾನಂದಭರಿತನಾಗಿ ತೃಷ್ಣೆಯನ್ನು ತೃಪ್ತಿಗೊಳಿಸಿಕೊಳ್ಳುವೆನೆಂದು ಆತುರದಿಂದ ಅಲ್ಲಿಗೆ ಬರುವದರ ಒಳಗಾಗಿ ಆ ಜಲಾಶಯವು ಇಂಗಿ ಹೋದರೆ ಎಷ್ಟು ದುಃಖ ಉಂಟಾಗುವದೋ ಅದರಂತೆ ನನಗೆ ದುಃಖವು ಪ್ರಾಪ್ತವಾಗಿ ಇರುವದು ಎಂಬದಾಗಿ ಹೇಳಿ ದೃಷ್ಟಿ ಚಂಚಲವಿಲ್ಲದೆ ತನ್ನ ಪುತ್ರನನ್ನೇ ನೋಡುತ್ತಾ ಇದ್ದನು. ನಂತರ ಬುದ್ಧನು ಅಲ್ಲಿಯೇ ಸ್ವಲ್ಪ ದೂರದಲ್ಲಿ ಕುಳಿತು ತನ್ನ ತಂದೆಯ ಅಭಿಪ್ರಾಯವನ್ನು ತಿಳಿದು ಮರುಕಪಟ್ಟು ಯಾವ ಮಾತನ್ನೂ ಆಡದೆ ತಂದೆಗೆ ವಂದನೆಯನ್ನುಮಾಡಿ ಸುಮ್ಮನಾದನು. ನಂತರ ತಂದೆಯು, ಮಗನನ್ನು ಕುರಿತು—ನೀನು ಈ ಯೌವನದಲ್ಲಿ ರಾಜ್ಯವನ್ನಾಳದೆ, ಸಕಲ ಶತ್ರುಗಳನ್ನು ಜೈಸದೆ, ಈ ರೀತಿ ಭಿಕ್ಷುಕನಾಗಿರುವುದು ಉಚಿತವಲ್ಲವು. ಅಲ್ಲದೆ ಮನುಷ್ಯನು ಯಾವ್ಯಾವ ಕಾಲದಲ್ಲಿ ಯಾವ್ಯಾವದನ್ನು ಆಚರಿಸಬೇಕೋ ಅದನ್ನೇ ಆಚರಿಸಬೇಕು! ಎಂಬದಾಗಿ ಪುತ್ರವಾತ್ಸಲ್ಯದಿಂದ ಹೇಳಿದನು. ಈ ಮಾತನ್ನು ಕೇಳಿದ ಬುದ್ಧನು ತನ್ನ ತಂದೆಯ ಅಭಿಪ್ರಾಯಕ್ಕೆ ಮರುಕಪಟ್ಟು ತನ್ನ ಸಾವಿರಾರು ಶಿಷ್ಯರ ಕಡೆಗೆ ತಿರುಗಿಕೊಂಡು ಹೇಳಿದ್ದೇನೆಂದರೆ—ಎಲೈ ಭಿಕ್ಷುಗಳೇ, ನಮ್ಮ ರಾಜನಿಗೆ(ತಂದೆಗೆ) ಇನ್ನುಪುತ್ರಾಭಿಮಾನವು ಬಿಡುಗಡೆಯಾಗಲಿಲ್ಲ. ಆದರೆ ಅವನ ಪುತ್ರ

ನಾದ "ಸಿದ್ಧಾರ್ಥ" ನು ಮೃತನಾಗಿರುವುದಲ್ಲದೆ, ಬೋಧಿಸತ್ವನಾಗಿರುವನು. ಆದರೆ ಈ ಬೋಧಿಸತ್ವನಿಗಾದರೋ ಲೋಕವೆಲ್ಲಾ ಮಾತಾಪಿತೃಗಳಾಗಿರುವದ್ದರಿಂದ ಇವನು ಶುದ್ಧೋದನನಿಗೆ ಮಾತ್ರ ಮಗನಲ್ಲ. ಹೀಗಿರುವಲ್ಲಿ ಇದರ ನಿಜಾಭಿಪ್ರಾಯವನ್ನು ತಿಳಿಯದೇ ರಾಜನು ಮಮತಾಸಾಗರದಲ್ಲಿ ಮುಳುಗಿರುವನು. ಇವನ ಅಜ್ಞಾನವನ್ನು ನಾಶಪಡಿಬೇಕೆಂದು ಯೋಚಿಸಿ, ಅಲ್ಲಿಯೇ ಸಮಾಧಿಗತನಾಗಿ ದೇಹಾಭಿಮಾನವನ್ನು ಬಿಟ್ಟು ಪರಕಾಯಪ್ರವೇಶ ಮುಂತಾದ ಅಣಿಮಾದಿ ಅಷ್ಟಸಿದ್ಧಿಗಳಿಂದ ತನ್ನ ತಪಃಪ್ರಭಾವವನ್ನು ತೋರಿಸಿದನು. ಇದನ್ನು ನೋಡಿದ ಶುದ್ಧೋದನನು ಪುತ್ರಾಭಿಮಾನವನ್ನು ಬಿಟ್ಟು ವೈರಾಗ್ಯವನ್ನು ತಾಳಿದನು. ನಂತರ ಶುದ್ಧೋದನನು ಮಗನೆಂಬ ಭಾವನೆಯನ್ನು ತ್ಯಜಿಸಿ ಗುರುಭಾವನೆಯನ್ನು ವಹಿಸಿ ಎಲೈ ಮಹಾತ್ಮನೇ! ನಿನ್ನ ಶಿಷ್ಯರು ಸಹಿತವಾಗಿ ಅರಮನೆಗೆ ದಯಮಾಡಿಸಿ ಭಿಕ್ಷೆಯನ್ನು ಕೈಕೊಳ್ಳಬೇಕೆಂದು ಬೇಡಲು, ಬುದ್ಧನು ಎಲೈ ರಾಜನೇ, ಭಿಕ್ಷುಕರಿಗೆ ಭಿಕ್ಷವೇ ಧರ್ಮವಲ್ಲದೆ ರಾಜೋಪಚಾರಯುಕ್ತವಾದ ಮನ್ನಣೆಯು ಯುಕ್ತವಲ್ಲವೆಂದು ಹೇಳಿ ತನ್ನ ಭಿಕ್ಷಾಪಾತ್ರೆಯನ್ನು ಹಿಡಿದು, ತಾನು ಯಾವ ಪಟ್ಟಣದ ರಾಜಬೀದಿಗಳಲ್ಲಿ ರಾಜಪುತ್ರತ್ವದೊಡನೆ ಚತುರಂಗಬಲಯುಕ್ತನಾಗಿ ದಿವ್ಯರತ್ನಮಯವಾದ ರಥದಲ್ಲಿ ಸಂಚಾರ ಮಾಡುತ್ತಾ ಇದ್ದನೋ ಅದೇ ರಾಜಬೀದಿಯಲ್ಲಿ ಭಿಕ್ಷಾನ್ನವನ್ನು ಬೇಡಲು ಪ್ರಾರಂಭಿಸಿದನು. ಆ ಪಟ್ಟಣದವರೆಲ್ಲಾ ರಾಜಪುತ್ರನು ಭಿಕ್ಷುಕನಾಗಿ ಬಂದಿರುವನೆಂದು ಬಹು ಸಂಕಟಪಡುತ್ತಾ ಭೋಜನಕ್ಕೆ ನಮ್ಮಲ್ಲಿಗೆ ತಮ್ಮಲ್ಲಿಗೆ ದಯಮಾಡಿಸಬೇಕೆಂದು ಬೇಡುತ್ತಿದ್ದರು. ಆದರೆ ಬುದ್ಧನು ಯಾರಮನೆಗೂ ಪ್ರವೇಶ ಮಾಡದೆ ಬೀದಿಯೊಳಗೆ ಮೌನದಿಂದ ನಿಂತುಕೊಳ್ಳುತ್ತಾ ಇದ್ದನು. ಇದನ್ನು ನೋಡಿ ಸರ್ವರೂ ಬಗೆಬಗೆಯಾದ ಅನ್ನಪಾನಾದಿಗಳನ್ನು ತಂದು ಪಾತ್ರೆಗಳನ್ನೇ ಮುಂದಕ್ಕೆ ಇಡುತ್ತಾ ಇದ್ದರು. ಆದರೆ ಬುದ್ಧನು ಯಾವದನ್ನೂ ಮುಟ್ಟದೆ ಯಾರು ತನ್ನ ಭಿಕ್ಷಾಪಾತ್ರೆಗೆ ಅನ್ನ ಮುಂತಾದ ಯಾವದನ್ನಾದರೂ ನೀಡುವರೋ ಅದನ್ನು ಮಾತ್ರ ಅಭೇದದಿಂದ

ಸ್ವೀಕರಿಸಿ ಆ ಭಿಕ್ಷಾಪಾತ್ರೆಯು ಭರಿತವಾಗಲು ಭಿಕ್ಷವನ್ನು ಪೂರ್ತಿ ಮಾಡಿ, ಆ ಭಿಕ್ಷಮುಖೇನ ಲಭಿಸಿದ ಅನ್ನವನ್ನು ಸಹಾ ತೆಗೆದು ಕೊಂಡು ಒಂದು ಸರೋವರದ ಸಮೀಪಕ್ಕೆ ಹೋಗಿ ಅಲ್ಲಿ ಭಿಕ್ಷಾಟನೆಯ ಅನ್ನವನ್ನು ಭುಂಜಿಸುತ್ತಾ ಇದ್ದನು. ಇಷ್ಟರಲ್ಲಿಯೇ ದಾದಿಯರು ಓಡಿಬಂದು ಯಶೋದರೆಯನ್ನು ಕುರಿತು—ಎಲೈ ಕೋಮಲಾಂಗಿಯೇ! ನಿನ್ನ ಮನೋವಲ್ಲಭನು ಇಲ್ಲಿಗೆ ಬಂದಿದ್ದಾಗ್ಯೂ ಅರಮನೆಗೂ ಬಾರದೆ, ರಾಜಾನ್ನವನ್ನೂ ಸಹಾ ಇಚ್ಛಿಸದೆ ಭಿಕ್ಷಾಪಾತ್ರೆಯಲ್ಲಿ ಅನ್ನವನ್ನು ಬೇಡಿ ಊರ ಹೊರಗೆ ಇರುವ ಸರೋವರದ ಸಮೀಪಕ್ಕೆ ಭಕ್ಷಿಸಲು ಹೋದನಂತೆ ಎಂದು ಹೇಳಲು, ಯಶೋದರೆಯು ಬಹಳ ಶೋಕವನ್ನು ತಾಳಿ, ತನ್ನ ಪುತ್ರನಾದ ರಾಹುಲನನ್ನೂ ಸಹಾ ಕರೆದುಕೊಂಡು ಆ ಸ್ಥಳಕ್ಕೆ ಹೋಗಿ ಅಲ್ಲಿ ಊಟ ಮಾಡಲು ಸಿದ್ಧನಾಗಿದ್ದ ಪತಿಯನ್ನು ನೋಡಿ ಭಯಭರಿತ ವಿಶ್ವಾಸಗಳಿಂದ ನಮಸ್ಕಾರ ಮಾಡಿ ಆ ಕುಮಾರನನ್ನು ಸಹಾ ಅವನ ಪಾದಗಳ ಮೇಲೆ ಬೀಳಿಸಿ, ದುಃಖವನ್ನು ತಡೆಯಲಾರದೆ ಭೂಮಿಯ ಧೂಳಿನಲ್ಲಿ ಬಿದ್ದು ಹೊರಳುತ್ತಾ ಸ್ಮರಣೆತಪ್ಪಿದವಳಾದಳು. ನಂತರ ಬುದ್ಧನು ಇವಳ ಪಾತಿವ್ರತ್ಯಕ್ಕೂ ಮತ್ತು ನಡತೆಗೂ ಸಹಾ ಪರಮಾನಂದಭರಿತನಾದದ್ದಲ್ಲದೆ ಈಕೆಯ ಅಜ್ಞಾನಕ್ಕೆ ಬಹಳ ಚಿಂತೆಪಟ್ಟು, ತನ್ನ ಪುತ್ರನಾದ ರಾಹುಲನನ್ನು ಕುರಿತು—ಎಲೈ ಚಿರಂಜೀವಿಯೇ! ನಿಮ್ಮ ತಾಯಿಯನ್ನು ಸಮಾಧಾನಗೊಳಿಸೆಂದು ಹೇಳಲು ಆ ಹುಡುಗನು ಅದರಂತೆಯೇ ಸಮಾಧಾನ ಗೊಳಿಸಿದನು. ಅನಂತರ ಯಶೋದರೆಯು ಎಚ್ಚತ್ತು, ಬುದ್ಧನನ್ನು ಕುರಿತು—ಎಲೈ ಮನೋವಲ್ಲಭನೇ! ವೃಕ್ಷವನ್ನಾಶ್ರೈಸಿದ್ದ ಲತೆಯಂತೆ, ನಿನ್ನನ್ನೇ ಭಗವಂತನೆಂದು ಭಾವಿಸುತ್ತಿದ್ದ ನನ್ನನ್ನು ನಿಷ್ಕಾರಣವಾಗಿ ಬಿಟ್ಟು ಹೊರಟು ಹೋಗಬಹುದೇ? ಒಂದು ವೇಳೆ ನನಿಗೆ ನಿನ್ನ ಉದ್ದೇಶವನ್ನು ತಿಳಿಸಿದ್ದಲ್ಲಿ ನಾನೂ ನಿನ್ನ ಅಪ್ಪಣೆಯಂತೆ ಸೇವಾವೃತ್ತಿಗೆ ಬರುತ್ತಿದ್ದೆನು. ಹಾಗೆ ಮಾಡುವುದಕ್ಕೆ ಬದಲಾಗಿ ನಡುಗಾಡಿನಲ್ಲಿ ಅಂಧೆಯ ಕೈದಂಡವನ್ನು ಕಿತ್ತುಕೊಂಡಂತೆ ನನಿಗೆ ಇದುವರಿವಿಗೂ ದುಃಖವನ್ನುಂಟುಮಾಡಬಹುದೇ ಎಂದು ಹೇಳಿ

೮. ಬುದ್ಧನು ಯಶೋಧರೆಯನ್ನು ಕುರಿತು—ಎಲೈ ಸ್ತ್ರೀಯೇ ! ಈ ದುಃಖಗಳನ್ನೆಲ್ಲಾ ಪೂರ್ವಾಕೃತವೆಂದು ಭಾವಿಸು. ನಿನ್ನ ಸುಖದುಃಖಗಳಿಗೆ ಇತರರನ್ನು ನಿಂದಿಸಬೇಡ. ಆದರೆ ನೀನು ಪತಿಪರಾಯಣೆಯಾಗಿದ್ದ ವಿಷಯದಲ್ಲಿ ನಿನ್ನನ್ನು ಲೋಕವೆಲ್ಲಾ ಗೌರವಿಸುವರು. ಅದರಂತೆ ನಾನೂ ಗೌರವಿಸುವೆನು. ಅಲ್ಲದೆ ನಾನು ನಿನಗೆ ಪುನಃ ಪತಿಯಾಗುವೆನೆಂಬ ಭ್ರಾಂತಿಯನ್ನು ಬಿಡು. ನಿನ್ನ ಪತಿಯಾಗಿದ್ದ ಸಿದ್ಧಾರ್ಥನು ಬಹಳ ದಿವಸಗಳ ಹಿಂದೆಯೇ ಮೃತನಾಗಿ ಹೋದನು. ಆದರೆ ಈಗ ಸಿದ್ಧಾರ್ಥನಂತೆ ತೋರುವ ಬುದ್ಧನು ಲೋಕದ ಸ್ತ್ರೀಯರನ್ನೆಲ್ಲಾ ಮಾತೆಯೆಂದು ಭಾವಿಸಿರುವನು. ಆದಪ್ರಯುಕ್ತ ಆ ಭ್ರಾಂತಿಯನ್ನು ಬಿಡು. ಅಲ್ಲದೆ ಮನುಷ್ಯಪ್ರಾಣಿಯು ಈ ಜನ್ಮವನ್ನು ಧರಿಸಿರುವದು ಇಂದ್ರಿಯತೃಪ್ತಿಪಡಿಸಿಕೊಳ್ಳುವದಕ್ಕೆ ಎಂದಿಗೂ ಅಲ್ಲ. ಆದರೆ ಈ ಸರ್ವೋತ್ತಮವಾದ ಜನ್ಮದಲ್ಲಿ ಮಾಡುವ ಪ್ರಯತ್ನಗಳಿಂದಲೇ ಈ ಜನನಮರಣಗಳಿಂದುಂಟಾದ ಆಯಾಸವನ್ನು ನಿವಾರಣೆ ಮಾಡಿಕೊಂಡು ಸತ್ಯವಸ್ತುವಿನಲ್ಲಿ ಅಖಂಡ ವಿಶ್ರಾಂತಿಯನ್ನು ಹೊಂದುವ ಉದ್ದಿಶ್ಯವೇ ಮನುಷ್ಯಜನ್ಮವು ಪ್ರಾಪ್ತವಾಗುವುದು. ಈ ಕಾಲದಲ್ಲಿ ಪ್ರಯತ್ನ ಮಾಡದೇ ಇಂದ್ರಿಯ ಸೌಖ್ಯದಲ್ಲಿಯೇ ಗಮನವನ್ನಿಟ್ಟಲ್ಲಿ, ಇಂಥಾ ಸರ್ವೋತ್ತಮ ಜನ್ಮವು ಪುನಃ ದೊರೆಯಲಾರದು. ಆದಕಾರಣ ಈ ಪ್ರಾಪಂಚಿಕ ಚಿಂತೆಯನ್ನು ಬಿಟ್ಟು ನೀನೂ ಬುದ್ಧೆಯಾಗೆಂದು ಹೇಳಿದನು. ಈ ಮಾತನ್ನು ಕೇಳಿದ ಯಶೋಧರೆಯು ಸ್ತ್ರೀಯಾಗಿದ್ದಾಗ್ಯೂ ಈ ಸರ್ವೋತ್ತಮ ಬೋಧೆಯನ್ನು ಕೇಳಿದ ಒಡನೆಯೇ ಜ್ಞಾನಜ್ಯೋತಿಯು ಅಂಕುರವಾಗಿ ಪರಮಾನಂದವನ್ನು ಹೊಂದಿ, ಪೂರ್ಣವೈರಾಗ್ಯವನ್ನು ತಾಳಿ, ಬುದ್ಧನಿಗೆ ವಂದನೆಯನ್ನು ಮಾಡಿ, ಪತಿಮೋಹತನ್ನು ತ್ಯಜಿಸಿ, ಗುರು ಭಕ್ತಿಯನ್ನುತಾಳಿ, ತಾನೂ ಬುದ್ಧನ ಜೊತೆಯಲ್ಲಿಯೇ ಬರುವುದಾಗಿ ಅಪೇಕ್ಷಿಸಿದಳು. ಆದರೆ ಬುದ್ಧನು ಎಲೈ ಮಾತೆಯೇ ? ಈ ವೈರಾಗ್ಯವು ಒಂದು ಕ್ಷಣಮಾತ್ರದಲ್ಲಿ ಪಕ್ವವಾಗತಕ್ಕದ್ದಲ್ಲವು. ಆದಕಾರಣ ಕೆಲವುಕಾಲ ಇಲ್ಲಿಯೇ ಇದ್ದು ಜ್ಞಾನಪರಿಪಕ್ವತೆಯನ್ನು ಹೊಂದಿದನಂತರ ನೀನು ನಮ್ಮ

ಶಿಷ್ಯರ ಗುಂಪಿಗೆ ಬರಬಹುದೆಂಬದಾಗಿ ಹೇಳಿದನು. ಅಷ್ಟರಲ್ಲಿಯೇ ಬುದ್ಧನ ಪುತ್ರನಾದ ರಾಹುಲನು, ತಮ್ಮ ಮಾತೆಯನ್ನು ಕುರಿತು ಎಲೈ ಮಾತೆಯೇ ರಾಜಪತ್ನಿಯಾದ ನೀನು ಈ ತಿರಕನಿಗ್ಯಾತಕ್ಕೆ ಕಾಲಿಗೆ ಬಿದ್ದು ಬೇಡಿಕೊಳ್ಳುವೆ? ಇವನ್ಯಾರು? ಎಂಬದಾಗಿ ಕೇಳಿದನು. ಯಶೋದರೆಯ ಈ ಮಾತನ್ನುಕೇಳಿ, ಎಲೈ ಬಾಲಕನೆ ಈತನೇ ನಿನ್ನ ತಂದೆಯು ಎಂಬದಾಗಿ ಹೇಳಿದಳು. ಈ ಮಾತನ್ನು ಕೇಳಿದ ಬಾಲಕನು ಛೆ! ಈ ತಿರುಕನು ನನ್ನ ತಂದೆಯೆಂದು ಹೇಳಬೇಡ, ನನ್ನ ತಂದೆಯು ರಾಜಶ್ರೇಷ್ಠನಾದ ಸಿದ್ಧಾರ್ಥಭೂಪತಿಯು. ಯೆಂಬದಾಗಿ ಹೇಳಿದಮಾತನ್ನುಕೇಳಿ ಬುದ್ಧನೂ, ಯಶೋದರೆಯೂ ಮತ್ತು ಅಲ್ಲಿ ಸುತ್ತಲೂ ನಿಂತಿದ್ದ ಇತರ ಬಂಧುಗಳು ಸಹಾ ಮಹಾ ಕನಿಕರವನ್ನು ತಾಳಿದರು. ನಂತರ ಯಶೋದರೆಯು ಈತನೇ ನಿನ್ನ ತಂದೆಯು ಇನ್ನು ಮುಂದಕ್ಕೆ ನಿಮ್ಮ ಗುರುವಾಗುವನೆಂದು ಹೇಳಲು ಆ ಬಾಲಕನಿಗೆ ನಂಬಿಕೆ ಉಂಟಾಗಿ ಬಹಳ ಸಂತೋಷವನ್ನು ತಾಳಿ, ತಂದೆಯನ್ನು ಕುರಿತು—ತಂದೆಯೇ! ಇದೇಕೆ ಹೀಗೆ ಇರುವೆ? ಅರಮನೆಯ ಭಾವಚಿತ್ರದಲ್ಲಿ ಇದ್ದಂತೆ ಇಲ್ಲಿ ನೀನು ಕಾಣುವದಿಲ್ಲವಲ್ಲಾ! ನಮ್ಮ ತಾಯಿಯು ಪ್ರತಿನಿತ್ಯವೂ ಭಾವಚಿತ್ರದಲ್ಲಿ ತೋರಿಸುತ್ತಿದ್ದ ನೀನು ಕೂತುಕೊಳ್ಳುವ ಕುದುರೆಯನ್ನೂ, ಪಟ್ಟದ ಕತ್ತಿ, ರತ್ನಹಾರಗಳನ್ನು ಸಹಾ ಯಾರಿಗೆ ಕೊಟ್ಟೆ? ನಾನು ನಿನ್ನನ್ನು ನೋಡಬೇಕೆಂದು ಪ್ರತಿನಿತ್ಯವೂ ನಮ್ಮ ತಾಯಿಯನ್ನು ಕಾಡುತ್ತಿದ್ದೆನು. ಹಾಗೆ ನಾನು ಕಾಡಿದಾಗೆಲ್ಲಾ ಭಾವಚಿತ್ರನಲ್ಲಿ ನಿನ್ನನ್ನು ತೋರಿಸುತ್ತಿದ್ದಳು. ಈಗ ನೀನೇ ಬಂದಿರುವೆ ಆದಕಾರಣ ನನಗೆ ತಿಂಡಿಗೆ ಏನಾದರೂ ಕಾಸು ದುಡ್ಡನ್ನು ಕೊಡು. ಎಂಬದಾಗಿ ತಮ್ಮ ತಂದೆಯ ಕೈಗಳನ್ನು ಹಿಡಿದು ಕಾಡಲು ಪ್ರಾರಂಭಿಸಿದನು. ಈ ಬಾಲಕನ ಬಾಲತ್ವವನ್ನು ನೋಡಿ ಬುದ್ಧನು ಬಹಳವಾಗಿ ಸಂತೋಷಪಟ್ಟು, ಅವನನ್ನು ಕುರಿತು ಹೇಳಿದ್ದೇನಂದರೆ:—ಎಲೈ ಬಾಲಕನೇ! ನಾನು ನಿಮ್ಮ ತಂದೆಯಾದ ಸಿದ್ಧಾರ್ಥನಾಗಿದ್ದ ಕಾಲದಲ್ಲಿ ನೀನು ಏನು ಕೇಳಿದ್ದರೂ ತಂದು ಕೊಡುತ್ತಿದ್ದಿನು. ಈಗ ನಾನೇ ತಿರುಕನಾಗಿರುವಲ್ಲಿ ನಿನಗೆ ಏನ್ನು

ತಾನೇ ಕೊಟ್ಟೇನು ? ಆದರೂ ನೀನು ನನ್ನನ್ನು ತಿಂಡಿಗೆ ದುಡ್ಡುಕಾ ಸನ್ನು ಕೇಳಿದ್ದರಿಂದ, ನಿತ್ಯವೂ ತಿಂಡಿಗೆ ಮಾರ್ಗವಾದ ಭಿಕ್ಷಾಟನೆ ಯನ್ನು ನಿನಿಗೂ ಕಲಿಸುವೆನು. ಅಲ್ಲದೆ ಈಗ ನಾನು ತಂದಿರುವ ಭಿಕ್ಷಾನ್ನವನ್ನು ನೀನೂ ಸ್ವಲ್ಪ ಭುಜಿಸು. ನಾಳೆ ದಿನದಿಂದ ಅದರ ರುಚಿಯು ನಿನಿಗೇ ತಲೆದೋರುವುದೆಂದು ಹೇಳಿ ಆ ಹುಡುಗನಿಗೆ ತಾನು ತಂದ ಭಿಕ್ಷಾನ್ನದಲ್ಲಿ ಸ್ವಲ್ಪ ಭಾಗವನ್ನು ಊಟ ಮಾಡಿಸಿದನು. ನಂತರ ಬುದ್ಧನು ಮಗನನ್ನು ಕುರಿತು ಪುನಃ ಹೇಳಿದ್ದೇನೆಂದರೆ:— ಎಲೈ ಬಾಲಕನೇ! ನೀನು ನನ್ನನ್ನು ತಂದೆಯೆಂದು ಕರೆಯುತ್ತೀ? ಅದಕ್ಕನುಸಾರವಾಗಿ ನಾನು ನಿನಿಗೆ ತಂದೆಯಾಗಿದ್ದದ್ದು ಸತ್ಯವು ಇನ್ನು ಮುಂದಕ್ಕೂ ನಿನಗೆ ತಂದೆಯಾಗಿರಬೇಕೆಂಬ ಕುತೂಹಲವು ನನ ಗೆ ಇರುವುದ್ದರಿಂದ, ನೀನು ಬೇಡಿದಂತೆ ತಿಂಡಿಗೆ ದುಡ್ಡುಕಾಸು ಕೊಡು ವುದಕ್ಕೆ ಬದಲಾಗಿ, ನಿರಂತರವಾದದ್ದಾಗಿಯೂ, ಯಾವ ಚೋರ ಭಯವು ಇಲ್ಲದ್ದಾಗಿಯೂ, ಎಲ್ಲಾ ಐಶ್ವರ್ಯಗಳಿಗಿಂತಲೂ ಸಹಾ ಅತ್ಯುತ್ತಮವಾದದ್ದಾಗಿಯೂ ಇರುವ ಜ್ಞಾನೈಶ್ವರ್ಯವನ್ನು ಕೊಡ ಬೇಕೆಂದು ಯೋಚಿರುವುದ್ದರಿಂದ ಅದನ್ನು ಸ್ವೀಕರಿಸೆಂದು ಆ ಬಾಲಕ ನಿಗೆ ಜ್ಞಾನೋಪದೇಶ ಮಾಡಿದ್ದಲ್ಲದೆ, ತಾನು ತಂದಿದ್ದ ಬಿಕ್ಷಾನ್ನ ವನ್ನು ಯಶೋದರೆಗೆ ಸ್ವಲ್ಪ ಭಾಗವನ್ನು ಕೊಟ್ಟು ಅಲ್ಲಿಂದ ತೆರಳಿ ತನ್ನ ಶಿಷ್ಯರ ಗುಂಪಿಗೆ ಶೇರಿದನು.

ನಂತರ ಈ ಬುದ್ಧನ ಪತ್ನಿ ಪುತ್ರರೀರ್ವರೂ, ವೈರಾಗ್ಯವನ್ನು ಧರಿಸಿ ತಾವೂ ಸನ್ಯಾಸವನ್ನು ವಹಿಸಿದರು. ಇದನ್ನು ನೋಡಿದ ಶು ದ್ಧೋದನನೂ ಮತ್ತು ಇವನ ಪತ್ನಿ ಪುತ್ರರೂ, ಸಹಾ ಮಹಾ ವೈರಾಗ್ಯವನ್ನು ತಾಳಿ ರಾಜ್ಯವನ್ನು ತನ್ನ ಮಗನಿಗೆ (ಯರಡನೆ ಹೆಂಡ ತಿಮಗನಿಗೆ) ಒಪ್ಪಿಸಿ ತಾವುಗಳೂ ಸಹಾ ಸನ್ಯಾಸವನ್ನು ವಹಿಸಿದರು. ನಂತರ ಈ ವಿಷಯಗಳನೆಲ್ಲಾ ನೋಡಿದ ಮಂತ್ರಿ ಪುರೋಹಿತರೂ ಸನ್ಯಾಸಿಗಳಾಗಿ ಹೋದರು. ನಂತರ ಶುದ್ಧೋದನನ ದ್ವಿತಿಯಪತ್ನಿ ಪುತ್ರನೂ, ಮತ್ತು ಯಶೋದರೆಯ ಸಹೋದರನಾದ ದೇವದತ್ತನೂ, ಮತ್ತು ಮುಖ್ಯ ಮಂತ್ರಿಗಳಾದ ಆನಂದ, ನಂದ, ಕಿಪ್ಪಿ, ರುದ್ಧ ಅನಿ

ನಂದೋಪನಂದ, ಕುಂದನಂದನ, ಮುಂತಾದವರೂ, ಮತ್ತು ಇವರ ಮಕ್ಕಳುಗಳೂ ಸಹಾ ಬುದ್ಧನ ವಿಮಲ ತತ್ವಕ್ಕೆ ಅಧೀನರಾಗಿ ಸಂಸಾರವನ್ನು ತ್ಯಜಿಸಿ ಸನ್ಯಾಸಿಗಳಾದರು. ಈ ರೀತಿಯಾಗಿ ಬುದ್ಧನು ತನ್ನ ಬಂಧುಗಳನೆಲ್ಲಾ ಸತ್ಯತತ್ವದಿಂದ ತೃಪ್ತಿಪಡಿಸಿ ಸರ್ವರನ್ನೂ ತನ್ನ ಶಿಷ್ಯರನ್ನಾಗಿ ಮಾಡಿಕೊಂಡು, ನಂತರ ಆ ಕಪಿಲವಸ್ತು ರಾಜ್ಯವನ್ನು ಬಿಟ್ಟು ಪ್ರಪಂಚದ ಅಜ್ಞಾನವನ್ನು ತನ್ನ ಸರ್ವೋತ್ತಮವಾದ ತತ್ವದಿಂದ ನಾಶಪಡಿಸಲು ಹೊರಟು ಹೋದನು.

# ಬುದ್ಧನ ತತ್ವೋಕ್ತಿಗಳು.

---

## ಬ್ರಾಹ್ಮಣ ಬುದ್ಧರ ಸಂವಾದ.

ಒಂದಾನೊಂದು ವೇಳೆ ಬುದ್ಧನ ಜ್ಞಾನವನ್ನು ಪರೀಕ್ಷಿಸುವದ ಕ್ಕೋಸ್ಕರ ಒಬ್ಬ ಬ್ರಾಹ್ಮಣನ ವೇಷವನ್ನು ಧರಿಸಿದ ದೇವಾಂಶ ಪುರುಷನೊಬ್ಬನು ಬುದ್ಧನ ಸಮೀಪಕ್ಕೆ ಬಂದು ಬುದ್ಧನನ್ನು ಕುರಿತು ಪ್ರಶ್ನೆಗಳನ್ನು ಮಾಡಿದನು. ಆ ಪ್ರಶ್ನೆಗಳಿಗೆಲ್ಲಾ ಬುದ್ಧನು ಸರ್ವೋ ತ್ಕೃಷ್ಟವಾದ ಉತ್ತರಗಳನ್ನು ಕೊಟ್ಟನು.

ಬ್ರಾಹ್ಮಣನ ಪ್ರಶ್ನೆ :—ಲೋಕದಲ್ಲಿ ಅತ್ಯಂತ ಹರಿತವಾದ ಕತ್ತಿ ಯಾವದು ? ಮರಣವನ್ನುಂಟುಮಾಡುವ ಹಾಲಾಹಲವ್ಯಾವ ದು (ವಿಷವ್ಯಾವದು) ? ಘೋರವಾದ ಬಡಬಾಗ್ನಿಗೆ (ಸಿಡಿಲಿಗೆ) ಸಮವಾದ ಬೆಂಕಿಯಾವದು ? ಗಾಢಾಂಧಕಾರವಾದ ರಾತ್ರಿ ಯಾವದು ?

ಬುದ್ಧನ ಉತ್ತರ :—ಕೋಪದಿಂದ ಆಡಿದ ಒಂದು ಮಾತೇ ಲೋಕ ದಲ್ಲಿ ಅತ್ಯಂತ ಹರಿತವಾದ ಕತ್ತಿಯು. ದುರಾಶೆಯೇ ಹಾಲಾ ಹಲಕ್ಕೆ ಸದೃಶವಾದ ವಿಷವು. ಕಾಮ (ಸ್ತ್ರೀ ಮೋಹ)ವೇ ಬಡಬಾಗ್ನಿಗೆ ಸದೃಶವಾದ ಬೆಂಕಿಯು. ಅಜ್ಞಾನವೇ ಗಾಢಾಂ ಧಕಾರವಾದ ರಾತ್ರಿಯು.

ಬ್ರಾಹ್ಮಣ :—ಲೋಕದಲ್ಲಿ ಅತ್ಯಧಿಕವಾದ ಲಾಭವನ್ನು ಹೊಂದುವ ನ್ಯಾರು? ಅತ್ಯಂತವಾಗಿ ನಷ್ಟವನ್ನು ಹೊಂದುವನು ಯಾರು ? ವಜ್ರ ಕವಚಕ್ಕೆ (Armour) ಸಮಾನವಾದದ್ದು ಯಾವದು ? ಸರ್ವೋತ್ತಮವಾದ ಬಾಣವ್ಯಾವದು ?

ಬುದ್ಧ :—ಪರೋಪಕಾರಕ್ಕಾಗಿ ಯಾವನು ವ್ಯಯಮಾಡುವನೋ ಅವನೇ ಅತ್ಯಧಿಕ ಲಾಭವನ್ನು ಹೊಂದುವನು. ಪರೋಪಕಾರ ಮಾಡದೆ ಇತರರಿಂದ ಉಪಕಾರವನ್ನು ಹೋದುವನೇ ಅತ್ಯಂತ ನಷ್ಟವನ್ನು ಹೊಂದುವವನು. ಶಾಂತಿ (patience) ಯೇ ವಜ್ರಕವಚಕ್ಕೆ ಸಮಾನವು. ಜ್ಞಾನವೇ ಸರ್ವೋತ್ತಮವಾದ ಬಾಣವು.

ಬ್ರಾಹ್ಮಣ :—ಅತ್ಯಂತ ಅಪಾಯಕರನಾದ ಕಳ್ಳನ್ಯಾರು ? ಅತ್ಯಂತ ಅಮೂಲ್ಯವಾದ ಐಶ್ವರ್ಯವ್ಯಾವದು ? ಇಹಲೋಕ ಮತ್ತು ಪರಲೋಕದಲ್ಲೂ ಸ್ಥಿರ್ತಿಯಿಂದ ಸಂಚರಿಸತಕ್ಕದ್ದು ಯಾವದು ?

ಬುದ್ಧ :—ದುರಾಲೋಚನೆಯೇ ಅತ್ಯಂತ ಅಪಾಯಕರವಾದ ಕಳ್ಳನಿಗೆ ಸಮಾನವು. ಸನ್ಮಾರ್ಗ (ವ್ಯಭಿಚಾರವಿಲ್ಲದ) ನಡತೆಯೇ ಅಮೂಲ್ಯವಾದ ಐಶ್ವರ್ಯವು. ನಾಶರಹಿತವಾದ ಸುಜ್ಞಾನವೇ ಇಹಲೋಕ ಪರಲೋಕಗಳಲ್ಲೂ ಸ್ಥಿರ್ತಿಯಿಂದ ಸಂಚರಿಸತಕ್ಕದ್ದು.

ಬ್ರಾಹ್ಮಣ :—ಮನಸ್ಸನ್ನು ಸೆಳೆಯುವದು ಯಾವದು ? ಅಸಹ್ಯಕರವಾದದ್ದು ಯಾವದು ? ಸಹಿಸಲಶಕ್ಯವಾದ ಯಾತನೆ ಯಾವದು ? ನಿರಂತರವಾದ ಆನಂದವ್ಯಾವದು ?

ಬುದ್ಧ :—ನಿರ್ದೋಷವಾದ ನಡತೆಯೇ ಮನಸ್ಸನ್ನು ಸೆಳೆಯತಕ್ಕದ್ದು. ದೋಷಯುಕ್ತವಾದ (ದೂಷಣೀಯವಾದ) ನಡತೆಯೇ ಅಸಹ್ಯಕರವಾದದ್ದು. ಕೆಡಕನ್ನು ಎಣಿಸುವ ಚಿತ್ತವೇ ಸಹಿಸಲಶಕ್ಯವಾದ ಯಾತನೆಯು. ವೈರಾಗ್ಯವೇ ನಿರಂತರವಾದ ಆನಂದವು.

ಬ್ರಾಹ್ಮಣ :—ಲೋಕಕ್ಕೆ ನಾಶವನ್ನುಂಟುಮಾಡತಕ್ಕದ್ದು ಯಾವದು? ಸ್ನೇಹಕ್ಕೆ ಭಂಗವನ್ನುಂಟುಮಾಡುವದ್ಯಾವದು ? ಅತ್ಯಂತ ಕ್ರೂರವಾದ ಜ್ವರವ್ಯಾವದು ? ಸರ್ವೋತ್ತಮನಾದ ವೈದ್ಯನ್ಯಾರು ?

ಬುದ್ಧ :—ಅಜ್ಞಾನವೇ ಲೋಕಕ್ಕೆ ನಾಶವನ್ನುಂಟುಮಾಡತಕ್ಕದ್ದು. ಅಸೂಯೆಯು, ಮತ್ತು ಸ್ವಾರ್ಥತೆ ಇವುಗಳೇ ಸ್ನೇಹಕ್ಕೆ ಭಂಗವನ್ನುಂಟುಮಾಡತಕ್ಕದ್ದು. ಮಾತ್ಸರ್ಯವೇ ಅತ್ಯಂತ ಕ್ರೂರವಾದ ಜ್ವರವು. ಬುದ್ಧನೇ (ಜ್ಞಾನಿಯೇ) ಸರ್ವೋತ್ತಮನಾದ ವೈದ್ಯನು.

ಬ್ರಾಹ್ಮಣ :—ಬೆಂಕಿಯಿಂದ ಸುಡಲ್ಪಡದೆ ಇರುವದಾಗಿಯೂ, ಅಥವಾ ನೀರಿನಿಂದ ಕರಗದೇ ಇರುವದಾಗಿಯೂ, ಯಾವದೊಂದರಿಂದಲೂ ಭಕ್ಷಿಸಲಸಾಧ್ಯವಾಗಿಯೂ, ಅಥವಾ ಘಾಳಿಯಿಂದ ಮುರಿಯಲ್ಪಡದೇ ಇರುವದಾಗಿಯೂ, ಅದರೆ ಪ್ರಪಂಚಕ್ಕೆಲ್ಲಾ ಸುಖವನ್ನುಂಟುಮಾಡುವ ಶಕ್ತಿಯನ್ನು ಕೊಡತಕ್ಕದ್ದು ಯಾವದು ?

ಬುದ್ಧ :—ಸ್ವಾರ್ಥತೆಗೆ ಅಲ್ಲದೆ ಪರೋಪಕಾರಕ್ಕಾಗಿಯೇ ಮಾಡಿದ ಸತ್ಕಾರ್ಯದ ಯಶಸ್ಸು. ಈ ಯಶಸ್ಸನ್ನು ನಾಶಮಾಡಬೇಕೆಂದು ಬರುವ ವೈರಿಯು ಎಂಥಾ ಸಮರ್ಥನಾದಾಗ್ಯೂ, ಅಥವಾ ಎಂಥಾ ಕ್ರೂರನಾದಾಗ್ಯೂ ಅವನಿಂದ ಎಂದಿಗೂ ನಾಶವಾಗುವದಿಲ್ಲ.

## ಬುದ್ಧನ ದಶವಿಧವಾದ ಕಟ್ಟಳೆಗಳು.

ಲೋಕದ ಸಮಸ್ತ ಪ್ರಾಣಿಗಳೂ ಹತ್ತು ದುಷ್ಕಾರ್ಯಗಳನ್ನು ಮಾಡುವದ್ದರಿಂದ ಕೆಟ್ಟವಸ್ತುವೆನ್ನಿಸಿಕೊಳ್ಳುತ್ತವೆ. ಅದರೆ ಹತ್ತು ಕೆಲಸಗಳನ್ನು ವರ್ಜ ಮಾಡುವದ್ದರಿಂದ ಬಳ್ಳೆ ವಸ್ತುಗಳೆನ್ನಿಸಿಕೊಳ್ಳುತ್ತವೆ.

ಶರೀರದಿಂದ (ಅಂದರೆ ಸ್ಥೂಲಶರೀರದಿಂದ) ಮಾಡಲ್ಪಡುವ ಮೂರು ಪಾಪಗಳು, ನಾಲಿಗೆಯಿಂದ (ಅಂದರೆ ಶಬ್ದ ಮೊದಲಾದ ಇಂದ್ರಿಯಗಳಿಂದ) ಮಾಡಲ್ಪಡುವ ನಾಲ್ಕು ಪಾಪಗಳು, ಮತ್ತು ಮನಸ್ಸಿನಿಂದ (ಅಂದರೆ ಮನಸಾದ್ಯಂತಃಕರಣ ಚತುಷ್ಟಯದಿಂದ) ಮಾಡಲ್ಪ

ಡುವ ಮೂರು ಪಾಪಗಳು ಸಹಾ ಶೇರಿ ಹತ್ತು ಪಾಪಗಳಾಗಿರುತ್ತವೆ. ಅವುಗಳು ಯಾವವಂದರೆ :—

ಕೊಲೆಪಾತಕ, ಕಳ್ಳತನ, ಮತ್ತು ವ್ಯಭಿಚಾರ ಇವು ಶರೀರದ ಪಾಪಗಳು.

ಸುಳ್ಳು ಹೇಳುವದು, ಜರಿಯುವದು, ಬೈಯ್ಯುವದು, ಮತ್ತು ಸೋಮಾರಿತನದಿಂದ ಉಪಯೋಗವಿಲ್ಲದ ಮಾತನ್ನಾಡುತ್ತಾ ಕಾಲ ಕಳೆಯುವದು, ಇವು ನಾಲಿಗೆಯಿಂದ ಮಾಡಲ್ಪಡುವ ಪಾಪಗಳು.

ದುರಾಶೆ, ವೈರ, ವಂಚನೆ. ಇವು ಮನಸ್ಸಿನ ಪಾಪಗಳು. ಅಂತು ಪ್ರಾಣಿಗಳು ಮಾಡುವ ಹತ್ತು ಪಾಪಗಳು.

ಆದಕಾರಣ ಹತ್ತು ಕಟ್ಟಳೆಗಳನ್ನು ಕೊಡುತ್ತೇನೆ.

ಅವು ಯಾವವಂದರೆ :—

(೧) ಯಾವ ಪ್ರಾಣಿಯನ್ನೂ ಕೊಲ್ಲಬೇಡ, ಆದರೆ ಪ್ರಾಣಿಗಳ ಆತ್ಮವಿಷಯದಲ್ಲಿ ತುಂಬಾ ಭಕ್ತಿಯನ್ನಿಡು.

(೨) ಕಳ್ಳತನ ಮಾಡಬೇಡ, ಅಥವಾ ವಂಚನೆಯಿಂದ ಅಪಹಾರ ಮಾಡಬೇಡ, ಆದರೆ ಇತರರು ಕಷ್ಟದಿಂದ ಆರ್ಜಿಸಿದ ವಸ್ತುಗಳನ್ನು ಅವರು, ನಿರ್ಭೀತಿಯಿಂದ ಭೋಗಿಸಲು ಕೈಲಾದ ಸಹಾಯವನ್ನು ಮಾಡು.

(೩) ದುರ್ಮಾರ್ಗದಲ್ಲಿ ಪ್ರವರ್ತಿಸುವದಕ್ಕೆ ಹಿಂತೆಗಿ, ಮತ್ತು ಸತ್ಕಾಲಕ್ಷೇಪವನ್ನು ಮಾಡುತ್ತಾ ಚರಿಸು.

(೪) ಅನೃತವನ್ನಾಡಬೇಡ. ಆದರೆ ಸತ್ಯಾತ್ಮನಾಗಿರು, ಮತ್ತು ಸತ್ಯವನ್ನಾಡಿದರೂ ಇತರರಿಗೆ ಕೇಡಕನ್ನು ನೋವನ್ನು ಸಹಾ ಉಂಟು ಮಾಡದಂತೆ ತಾರತಮ್ಯವನ್ನರಿತು ಪ್ರೀತಿ ಪುರಸ್ಸರವಾಗಿಯೂ, ಮತ್ತು ಬುದ್ಧಿವಂತಿಕೆಯಿಂದ ಮಾತನಾಡು.

(೫) ನಿಶ್ಚಯವಲ್ಲದ ವರ್ತಮಾನವನ್ನು ಪ್ರಸಿದ್ಧಿಪಡಿಸಬೇಡ, ಅಥವಾ ನೀನು ಅದನ್ನು ಬಾಯಿಯಿಂದಲೂ ಉಚ್ಚರಿಸಬೇಡ, ಶತ್ರುಬಾ

ಧೆಗೆ ಸಿಕ್ಕಿ ಕಷ್ಟಪಡುತ್ತಾ ಇರುವ ಮನುಷ್ಯನು ನಿನಗೆ ದ್ರೋಹಿಯಾಗಿದ್ದಾಗ್ಯೂ ಆ ಕಾಲದಲ್ಲಿ ಅವನ ಅವಗುಣಗಳನ್ನು ಎಣಿಸದೆ, ಅವನಿಗೆ ಉಂಟಾಗಿರುವ ಬಾಧೆಗೆ ಮರುಕಪಟ್ಟು ಮನಃಪೂರ್ವಕವಾದ ಪ್ರೀತಿಯಿಂದ ಅವನನ್ನು ಶತ್ರುಗಳ ಬಾಧೆಯಿಂದ ಬಿಡಿಸುವದಕ್ಕೆ ಸಿದ್ಧನಾಗು.

(೬) ವಾಕ್ಪಾರುಷವನ್ನು ಮಾಡಬೇಡ, ಆದರೆ ಗಂಭೀರವಾಗಿಯೂ ನಯವಾಗಿಯೂ, ಮಾತನಾಡು.

(೭) ಉಪಯೋಗವಿಲ್ಲದ ಮಾತಿನಿಂದ ಕಾಲ ಕಳಿಯಬೇಡ, ಆದರೆ ಕೆಲಸವಿದ್ದಲ್ಲಿ ಆ ಕೆಲಸಕ್ಕೆ ಉಪಯೋಗಕರವಾದ ಮಾತನಾಡು, ಇಲ್ಲವೆ ಮೌನವನ್ನು ಧರಿಸು.

(೮) ಇತರ ಮನುಷ್ಯನಿಗೆ ಉಂಟಾದ ಸಂಪತ್ತಿನ ವಿಷಯದಲ್ಲಿ ದುರಾಶೆಯನ್ನು ತಾಳಬೇಡ, ಅಥವಾ ಅಸೂಯೆ ಪಡಲೂ ಬೇಡ, ಆದರೆ ಆ ವಿಷಯದಲ್ಲಿ ಸಂತೋಷಪಡು.

(೯) ಅನ್ಯರಿಗೆ ಹಾನಿಯನ್ನುಂಟುಮಾಡುವ ಯೋಚನೆಯನ್ನು ತೊಳೆದು ನಿನ್ನ ಚಿತ್ತವನ್ನು ಶುದ್ಧಿಮಾಡು ; ಎಲ್ಲಾ ವಿಧವಾದ ಕೋಪವನ್ನು ಮತ್ತು ಕೆಟ್ಟ ಮನಸ್ಸನ್ನು ಅಸೂಯೆಯನ್ನು ದೂರದಲ್ಲಿ ವರ್ಜಿಸು ; ಮತ್ತು ನಿನಗೆ ಅಪರಾಧ ಮಾಡಿದವನಲ್ಲಿಯೇ ಆಗಲಿ ಅಥವಾ ನಿನ್ನ ಶತ್ರುವಿನಲ್ಲೇ ಆಗಲಿ ದ್ವೇಷವನ್ನು ಬೆಳೆಸುವ ವಿಷಯದಲ್ಲಿ ಉತ್ಸಾಹವನ್ನು ಹೊಂದಬೇಡ. ಆದರೆ ಎಲ್ಲಾ ಪ್ರಾಣಿಗಳನ್ನು ಸರ್ವಸಮತ್ವದಿಂದಲೂ, ದಯೆಯಿಂದಲೂ, ಸಂತೋಷದಿಂದಲೂ ಆಲಿಂಗನ ಮಾಡಿಕೋ.

(೧೦) ಮನಸ್ಸಿನ ಅಜ್ಞಾನವನ್ನು ನಿರ್ಮೂಲ ಮಾಡು, ಮತ್ತು ನಿನಗೆ ಅತ್ಯವಶ್ಯಕವಾಗಿ ಇರುವ ಸತ್ಯಸ್ಥಾನವನ್ನು ತಿಳಿ, ಮತ್ತು ಅನುಮಾನ, ಭ್ರಾಂತಿ, ವಂಚನೆ ಇವುಗಳಿಗೆ ಎಂದಿಗೂ ಒಳಗಾಗಬೇಡ ; ಯಾತಕ್ಕೆಂದರೆ—ಅನುಮಾನವು ಜಿಗುಪ್ಸೆಯನ್ನೂ ಉತ್ಸಾಹಭಂಗವನ್ನೂ ಉಂಟುಮಾಡುತ್ತದೆ. ಮತ್ತು ಭ್ರಾಂತಿ, ವಂಚನೆಗಳು ನಿನ್ನನ್ನು ಕ್ಷುದ್ರಮಾರ್ಗಗಳಿಗೆ ಎಳೆದು ಶಾಶ್ವತವಾದ ನಿರ್ವಾಣಪದವಿಗೆ ಸೇರುವ ದಾರಿಗೆ ಹೋಗಲು ಅವಕಾಶ ಕೊಡುವದೇ ಇಲ್ಲ.

# ಧರ್ಮಪಾದ.

(೧) ಇದೇ ಧರ್ಮಪಾದವು ; ಇದೇ ಬುದ್ಧನ ಶಿಷ್ಯರಿಂದ ನಿರಂತರದಲ್ಲೂ ಪಾರಾಯಣಮಾಡಲ್ಪಡುವ ನಿರ್ವಾಣಪದವಿಯನ್ನುಂಟುಮಾಡುವ ಗೀತೆಯು.

(೨) ನಾವು ಪೂರ್ವಜನ್ಮದಲ್ಲಿ ಯಾವರೀತಿಯಲ್ಲಿ ಯೋಚಿಸಿದ್ದೆವೋ ಅದಕ್ಕನುಗುಣವಾಗಿ ಈ ಜನ್ಮದಲ್ಲಿ ಅನುಭವಿಸುತ್ತೇವೆ ; ಇದಕ್ಕೆ ನಮ್ಮ ನಮ್ಮ ಯೋಚನೆಯೇ ಕಾರಣವು ; ಮತ್ತು ನಮ್ಮ ಯೋಚನೆಯಂತೆಯೇ ನೆರವೇರಲ್ಪಡುವದು.

(೩) ಪಾಪಕೃತ್ಯವನ್ನು ಮಾಡುವವನು ಒಬ್ಬನೇ ; ಆ ಪಾಪಕ್ಕೆ ತಕ್ಕ ದುಃಖವನ್ನು ಅನುಭವಿಸುವವನೂ ಒಬ್ಬನೇ, ಮತ್ತು ದುಃಖಭೀತಿಯಿಂದ ಪಾಪಗಳನ್ನು ಮಾಡದೇ ಇರುವವನೂ ಒಬ್ಬನೇ; ಪರಿಶುದ್ಧನಾಗಬೇಕಾದರೆ ತನ್ನಿಂದಲೇ ಪರಿಶುದ್ಧನಾಗಬೇಕು ; ಪರಿಶುದ್ಧತೆಯೂ, ಮತ್ತು ಅಪರಿಶುದ್ಧತೆಯೂ ಸಹಾ ತನ್ನಿಂದಲೇ ಮಾಡಲ್ಪಡಬೇಕು ; ಒಬ್ಬನು ಮತ್ತೊಬ್ಬನನ್ನು ಎಂದಿಗೂ ಪರಿಶುದ್ಧನನ್ನಾಗಿ ಮಾಡಲಾರನು. (ಅಂದರೆ ಪಾಪಪುಣ್ಯ, ಸುಖದುಃಖಗಳಿಗೆ ಒಬ್ಬನೇ ಬಾಧ್ಯನೇ ಹೊರ್ತು ಇನ್ನೊಬ್ಬನು ಎಂದಿಗೂ ಬಾಧ್ಯನಲ್ಲ.)

(೪) ಮನುಷ್ಯನು ಪರಿಶುದ್ಧನಾಗಬೇಕಾದರೆ ತನ್ನ ಪ್ರಯತ್ನದಿಂದಲೇ ಆಗಬೇಕು. ತಥಾಗತರು (ಅಂದರೆ ಗುರುಜನರು) ಸನ್ಮಾರ್ಗವನ್ನು ತೋರಿಸುವದನ್ನು ಮಾತ್ರ ಮಾಡಬಲ್ಲರು. ಅದಕಾರಣ ಆ ಸನ್ಮಾರ್ಗದಲ್ಲಿ ಅನುಸರಿಸಿ ನಡಿಯುವದು ಮನುಷ್ಯನ ಕರ್ತವ್ಯವಾಗಿ ಇರುವದು. ಅದರಂತೆ ಆ ಸನ್ಮಾರ್ಗದಲ್ಲಿ ಯಾವ ಮನುಷ್ಯನು ಪ್ರವೇಶಿಸಿ ನಡೆಯುವನೋ ಆ ಮನುಷ್ಯನು ಮಾರನ ಬಂಧನದಿಂದ (ಅಂದರೆ ಸಂಸಾರಬಂಧನದಿಂದ) ಬಿಡುಗಡೆಯನ್ನು ಹೊಂದುತ್ತಾನೆ.

(೫) ಯೌವ್ವನದಿಂದಲೂ ಬಲದಿಂದಲೂ ಕೂಡಿದವನಾಗಿಯೂ, ಸೋಮಾರಿಯಾಗಿಯೂ ಮತ್ತು ಮನಸ್ಸು ಯೋಚನೆಯೂ ಸಹಾ ಇಲ್ಲದೆ ಅಶಕ್ತನಾಗಿಯೂ,ಇರುವ ಮನುಷ್ಯನಿಗೆ ಜ್ಞಾನವನ್ನು

ಮತ್ತು ನಿರ್ವಾಣಪದವಿಯನ್ನು ಸಹಾ ಹೊಂದಲು ಸಮೀಚೀನವಾದ ಸಮಯವು ದೊರೆತಾಗ್ಯೂ, ಎಚ್ಚರಗೊಳ್ಳದೆಯೂ ಪ್ರಯತ್ನಮಾಡ ದೆಯೂ ಯಾವನು ಅಲಕ್ಷ್ಯದಿಂದಿರುವನೋ, ಅಂಥಾ ಮೂಢ ಮತ್ತು ಸೋಮಾರಿ ಮನುಷ್ಯನು ಎಂದಿಗೂ ಜ್ಞಾನವನ್ನು ಮತ್ತು ನಿರ್ವಾಣಪದವಿಯನ್ನು ಪಡೆಯಲಾರನು.

(೬) ಯಾವ ಮನುಷ್ಯನು ಬಂಧನವನ್ನು ತಪ್ಪಿಸಿಕೊಳ್ಳಬೇ ಕೆಂದು ಅಪೇಕ್ಷಿಸುವನೋ ಅವನು ತನ್ನ ಇಂದ್ರಿಯಗಳ ವಿಷಯದಲ್ಲಿ ತುಂಬಾ ಜಾಗರೂಕನಾಗಿರಬೇಕು ; ಯಾವನು ಇಂದ್ರಿಯಗಳನ್ನು ನಿಗ್ರಹಿಸುವನೋ ಅವನನ್ನು ಸತ್ಯವು ತಲೆಗಾಯುವದು.

(೭) ಮನುಷ್ಯನು ತಾನು ಇನ್ನೊಬ್ಬನಿಗೆ "ಹೀಗೆ ನಡಿಯಬೇ ಕು, ಹೀಗೆ ಮಾಡಬೇಕು" ಎಂಬದಾಗಿ ಹೇಳುವಂತೆ ತಾನೂ ತನ್ನ ಮಾತಿನಂತೆ ನಡೆದು ಪರಿಶುದ್ಧವಾಗಿ ಇದ್ದಲ್ಲಿ ಇತರರನ್ನು ಪರಿಶುದ್ಧಿ ಮಾಡಬಹುದು ; ಆದರೆ ಮೊದಲು ತಾನು ಪರಿಶುದ್ಧನಾಗುವದು ದುರ್ಲಭವು.

(೮) ಒಬ್ಬನು ಸಾವಿರಾರು ಆವರ್ತಿ ಸಾವಿರಾರು ಜನಗಳನ್ನು ಯುದ್ಧದಲ್ಲಿ ಜೈಸುತ್ತಾನೆ, ಮತ್ತೊಬ್ಬನು ಒಂದಾವರ್ತಿ ತನ್ನನ್ನು ತಾನೇ (ಅಂದರೆ ತನ್ನ ಇಂದ್ರಿಯಗಳನ್ನು) ಜೈಸಿಕೊಳ್ಳುತ್ತಾನೆ, ಇವರಿ ಬ್ಬರಲ್ಲಿ ಎರಡನೆಯವನೇ ಸರ್ವೋತ್ತಮನಾದ ಜಯಶಾಲಿಯು.

(೯) ಮೂಢನು (ಅಂದರೆ ಅಜ್ಞಾನಿಯು) ಯತಿಯೇ ಆಗಲೀ ಉತ್ತಮಜಾತಿಯವನೇ ಆಗಲಿ, ಯಾಗಮಾಡಿದವನೇ ಆಗಲಿ, ಇದು ನನ್ನಿಂದ ಮಾಡಲ್ಪಟ್ಟಿತು, ಇತರರು ನನಗೆ ಅಧೀನರಾಗಿರಲಿ. ನಾನು ಶ್ರೇಷ್ಠನು, ಇತರರು ಕನಿಷ್ಠರು ಎಂಬದಾಗಿಯೂ, ಮತ್ತು ಯಾವ ವಿಧದಿಂದಲಾದರೂ ದೊಡ್ಡ ಹೆಸರನ್ನು ಪಡೆಯಬೇಕು ! ಎಂಬದಾಗಿ ಯೋಚಿಸುವದು ಅವನ ಕರ್ತವ್ಯವಾಗಿರುವದು. ಆದರೆ ಆ ಮೂಢ ನಿಗೆ ಯಾವ ಕೆಲಸವನ್ನು ಅಗತ್ಯವಾಗಿ ಮಾಡಬೇಕು ? ಮತ್ತು ಮನುಷ್ಯನ ಮುಖ್ಯೋದ್ದೇಶವೇನು ? ಎಂಬುವದನ್ನು ಯೋಚಿಸುವ ಯೋಗ್ಯತೆಯು ಎಂದಿಗೂ ಉಂಟಾಗುವದಿಲ್ಲ. ಆದರೆ ತನ್ನ ಸ್ವ

ಪ್ರೌಢಮೆಯಲ್ಲೇ ಗಮಿಸವಿರುತ್ತೆ. ಅಂಥಾ ಮನುಷ್ಯನು ಮಾಡುವ ಕಾರ್ಯಗಳೆಲ್ಲಾ ದುರಭಿಮಾನದಿಂದ ಮಾಡಲ್ಪಟ್ಟವುಗಳಾಗಿರುತ್ತವೆ.

(೧೦) ಕೆಟ್ಟಕೃತ್ಯಗಳನ್ನು ಮತ್ತು ತನಗೇ ಹಿಂಸೆಯನ್ನುಂಟು ಮಾಡುವ ಕೃತ್ಯಗಳನ್ನು ಮಾಡುವದು ಮನುಷ್ಯನಿಗೆ ಅತಿ ಸುಲಭ ವಾಗಿರುವದು ; ಆದರೆ ಇತರರಿಗೂ ಮತ್ತು ತನಗೂ ಸಹಾ ಸೌಜ ನ್ಯವನ್ನುಂಟುಮಾಡುವ ಕಾರ್ಯಗಳನ್ನು ಮಾಡುವದು ಕೇವಲ ಅಸಾಧ್ಯವು.

(೧೧) ಅಯ್ಯೋ ! ಈ ಅಶಾಶ್ವಿತವಾದ ದೇಹವು ಸ್ವಲ್ಪಕಾಲದಲ್ಲೇ ಶಿಥಿಲಹೊಂದಿ ಮತ್ತು ಜ್ಞಾನವನ್ನು ಹೊಂದದೆ ನಿಷ್ಪ್ರಯೋಜಕ ವಾದ ಮರದ ತುಂಡಿನಂತೆ ನೆಲದ ಮೇಲೆ ಬಿದ್ದು ಮಣ್ಣುಪಾಲಾಗಿ ನಾಶವನ್ನು ಹೊಂದುವದು, ಎಂಬುವದನ್ನು ತಿಳಿದಿದ್ದಾಗ್ಯೂ ಮನು ಷ್ಯನು ತನ್ನ ದೇಹವನ್ನು ಪೋಷಣೆಮಾಡುವ ಯೋಚನೆಯನ್ನು ನಿರಂತರದಲ್ಲೂ ಮಾಡುತ್ತಾನೆ. ಆ ಯೋಚನೆಯಂತೆ ಅದಕ್ಕನುಗುಣ ವಾದ ಕೆಲಸವನ್ನು ಮಾಡುತ್ತಾನೆ. ಇವನ ಕೆಲಸಕ್ಕನುಗುಣವಾದ ಜನ್ಮವನ್ನು ಸಹಾ ಮುಂದಕ್ಕೆ ಹೊಂದುತ್ತಾನೆ. ಕೆಟ್ಟ ಆಲೋಚನೆ ಗಳು ಕೆಟ್ಟಕೃತ್ಯವನ್ನುಂಟುಮಾಡುತ್ತವೆ. ಒಳ್ಳೇ ಆಲೋಚನೆಗಳು ಒಳ್ಳೇ ಕೃತ್ಯವನ್ನುಂಟುಮಾಡುತ್ತವೆ.

(೧೨) ಮನುಷ್ಯನು ಒಂದು ಕೆಲಸವನ್ನು ಮಾಡಬೇಕಾದಲ್ಲಿ ಚನ್ನಾಗಿ ಪರ್ಯಾಲೋಚಿಸಿ ಮಾಡಲಿ.

(೧೩) ದೃಢವಾದ ಜ್ಞಾನವೇ ನಿರ್ವಾಣಕ್ಕೆ ಮಾರ್ಗವು. ಅಜ್ಞಾನ ವೇ (ಅಂದರೆ ಜ್ಞಾನವನ್ನು ಸಂಪಾದಿಸದೇ ಇರುವದೇ) ಜನನ ಮರಣ ಕ್ಕೆ (ಹುಟ್ಟಿ ಸಾಯುವದಕ್ಕೆ) ಮಾರ್ಗವು. ಯಾರಿಗೆ ದೃಢಜ್ಞಾನ ಉಂಟೋ ಅವರು ಎಂದಿಗೂ ಸಾಯುವದಿಲ್ಲ : ಯಾರಿಗೆ ಜ್ಞಾನವಿ ಲ್ಲವೋ ಅವರು ಜೀವಿಸಿದ್ದರೂ ಸತ್ತವರಂತೆಯೇ ಭಾವಿಸಲ್ಪಡು ವರು.

(೧೪) ಯಾರು ಅಸತ್ಯದಲ್ಲಿ ಸತ್ಯವನ್ನು (ಅಂದರೆ ನಾಶಹೇತು ವಾದ ಪ್ರಪಂಚಭೋಗವನ್ನು ಸತ್ಯವೆಂದು, ಶಾಶ್ವಿತವೆಂದು) ಯೋಚಿ

ಸುತ್ತಾರೋ, ಮತ್ತು ಸತ್ಯದಲ್ಲಿ ಅಸತ್ಯವನ್ನು (ಅಂದರೆ ಶಾಶ್ವತವಾದ ಸತ್ಯಸ್ವರೂಪವಾದ ಚೈತನ್ಯದಲ್ಲಿ ನಂಬಿಕೆಯನ್ನಿಡದೆ ಸುಳ್ಳೆಂದು) ಯೋಚಿಸುತ್ತಾರೋ ಅವರು ಎಂದಿಗೂ ಸತ್ಯತ್ವವನ್ನು ಸೇರುವದೇ ಇಲ್ಲ. ಆದರೆ ಯಾರು ಅಸತ್ಯವನ್ನು ಅಸತ್ಯವೇ ಎಂಬದಾಗಿಯೂ, ಸತ್ಯವನ್ನು ಸತ್ಯವೇ ಎಂಬದಾಗಿ ಯೋಚಿಸುತ್ತಾರೋ ಅವರು ಸತ್ಯತ್ವವನ್ನು ಖಂಡಿತವಾಗಿ ಹೊಂದುತ್ತಾರೆ. ಅಸತ್ಯದಲ್ಲಿ ಸತ್ಯವನ್ನು ಯೋಚಿಸುವರು ಬಂಧನವನ್ನು ಹೊಂದುತ್ತಾರೆ. ಮತ್ತು ಸತ್ಯತ್ವದಲ್ಲಿಯೇ ಸತ್ಯವನ್ನು ಯಾರು ಯೋಚಿಸುತ್ತಾರೋ ಅವರು ಬಿಡುಗಡೆಯನ್ನು ಹೊಂದುವರು.

(೧೫) ಬಲವಾದ ಛಾವಣಿ ಇಲ್ಲದ ಮನೆಯನ್ನು ಮಳೆಯು ಹ್ಯಾಗೆ ಭೇದಿಸುವದೋ, ಅದರಂತೆ ಕಾಮವು ಚಿತ್ತಸ್ಥೈರ್ಯವಿಲ್ಲದ ಮೋಹಕರನ್ನು ಭೇದಿಸಿ ನಾಶಮಾಡುತ್ತದೆ; ಮತ್ತು ಮಳೆಯು ಬಲವಾದ ಛಾವಣಿಯುಳ್ಳ ಮನೆಯನ್ನು ಹ್ಯಾಗೆ ಭೇದಿಸಲಾರದೋ ಅದರಂತೆ ಮನಸ್ಸನ್ನು ಜೈಸಿದ ವಿವೇಕಿಯನ್ನು ಎಂದಿಗೂ ಭೇದಿಸಲಾರದು.

(೧೬) ಭೂಶೋಧಕರು (ಯಿಂಜಿನಿಯರುಗಳು) ತಮಿಗೆ ಬೇಕಾದ ಸ್ಥಳದಲ್ಲಿ ಭಾವಿಗಳನ್ನು ಹ್ಯಾಗೆ ತೋಡುತ್ತಾರೊ, ಮತ್ತು ಕಮ್ಮಾರರು ಕಬ್ಬಿಣವನ್ನು ತಮಿಗೆ ಬೇಕಾದಂತೆ ಹ್ಯಾಗೆ ಬಗ್ಗಿಸುತ್ತಾರೊ, ಬಡಗಿಗಳು ಅಗಾಧವಾದ ತೊಲೆಗಳನ್ನು ತಮಿಗೆ ಬೇಕಾದಂತೆ ಹ್ಯಾಗೆ ಕತ್ತರಿಸುತ್ತಾರೊ, ವಳ್ಳೆ ಸವಾರನು ಯಂಥಾ ದುಡುಕಿನ ಕುದುರೆಯನ್ನಾದರೂ, ತನ್ನ ಸ್ವಾಧೀನಕ್ಕೆ ಹ್ಯಾಗೆ ತರುತ್ತಾನೊ, ಅದರಂತೆ ವಿವೇಕಿಗಳಾದ ಮನುಷ್ಯರು ತಮ್ಮ ದುರ್ಗುಣಗಳನ್ನು ತಾವೇ ತಿದ್ದಿಕೊಳ್ಳುವದಲ್ಲದೆ ಲೋಕದ ನಿಂದೆಗೂ ಭೂಷಣಕ್ಕೂ ಸಹಾ ವಳಗಾಗದೇಯಿರುತ್ತಾ, ಸತ್ಯವಾಕ್ಯಗಳನ್ನು ಕೇಳಿದ ವಡನೆಯೇ, ಆಳವಾಗಿಯೂ, ಮೃದುವಾಗಿಯೂ, ನಿಶ್ಚಲವಾಗಿಯೂ ಯಿರುವ ನಿರ್ಮಲ ಸರೋವರದಂತೆ ಶಾಂತತೆಯುಳ್ಳವರಾಗುತ್ತಾರೆ.

(೧೭) ಯಾವ ಮನುಷ್ಯನಾದರೂ ದುರಭಿಪ್ರಾಯದಿಂದ ವಂದು ಕ್ರೂರವಾದ ಮಾತನ್ನೇ ಆಗಲೀ ಅಥವಾ ಕೃತ್ಯವನ್ನೇ ಆಗಲಿ ಮಾಡಿದಲ್ಲಿ, ಗಾಡಿಯನ್ನು ಯಳದುಕೊಂಡು ಹೋಗುವ ಯತ್ತಿನ ಕಾಲುಗಳಹಿಂದೆ ಆ ಗಾಡಿಯ ಚಕ್ರವು ಹ್ಯಾಗೆ ಹಿಂಬಾಲಿಸುವದೊ ಆದರಂತೆ ಅವಕ್ಕೆ ಸರಿಯಾದ ದುಃಖವು ಆ ಮಾತುಗಳನ್ನು ಮತ್ತು ಆ ಕೃತ್ಯವನ್ನೂ ಸಹಾ ಹಿಂಬಾಲಿಸುತ್ತದೆ.

(೧೮) ವಂದು ದುಷ್ಕೃತ್ಯವು ಮಾಡದೆ ನಿಂತು ಹೋಗುವದು ಉತ್ತಮವು, ಯಾತಕ್ಕಂದರೆ, ಮಾಡಿದವನಿಗೆ ಆ ಕೃತ್ಯಕ್ಕನುಗುಣವಾದ ದುಃಖವು ಪ್ರಾಪ್ತವಾದಲ್ಲಿ ಸಂಕಟದಿಂದ ಪಶ್ಚಾತ್ತಾಪಪಡುತ್ತಾನೆ. ಆದರೆ ವಂದು ಸತ್ಕಾರ್ಯವನ್ನು ಮಾಡುವದು ಉತ್ತಮವು, ಯಾತಕ್ಕಂದರೆ ಮಾಡಿದ ಮನುಷ್ಯನು ಈ ಕೃತ್ಯಕ್ಕಾಗಿ ದುಃಖವನ್ನು ಹೊಂದುವದೂ ಯಿಲ್ಲಾ ಪಶ್ಚಾತ್ತಾಪಪಡುವದೂ ಯಿಲ್ಲ.

(೧೯) ಒಬ್ಬ ಮನುಷ್ಯನು ಒಂದಾವರ್ತಿ ಪಾಪಕೃತ್ಯವ್ಯನ್ನು ತಿಳಿಯದೇ ಮಾಡಿದ್ದಲ್ಲಿ ಅದನ್ನು ಮುಂದಕ್ಕೆ ಮಾಡದೇ ಯಿರಲಿ, ಮತ್ತು ಅವನು ಪಾಪ ಕೃತ್ಯಗಳ ವಿಷಯದಲ್ಲಿ ಉತ್ಸಾಹವನ್ನು ಬಿಡಲಿ, ಯಾತಕ್ಕಂದರೆ ಪಾಪಕೃತ್ಯಕ್ಕೆ ಫಲ ದುಃಖವು. ಮತ್ತು ಒಬ್ಬ ಮನುಷ್ಯನು ವಂದು ಪುಣ್ಯಕಾರ್ಯವನ್ನು ಮಾಡಿದಲ್ಲಿ ಪುನಹ ಅದನ್ನು ಅವನು ಮಾಡಲಿ, ಮತ್ತು ಪುಣ್ಯಕೃತ್ಯದಲ್ಲಿ ಉತ್ಸಾಹವನ್ನು ಹೊಂದಲಿ, ಯಾತಕ್ಕಂದರೆ ಪುಣ್ಯಕೃತ್ಯಕ್ಕೆ ಫಲ ಸಂತೋಷವು.

(೨೦) ಯಾವ ಮನುಷ್ಯನು ದುಷ್ಕಾರ್ಯಗಳ ವಿಷಯದಲ್ಲಿ ಅಲಕ್ಷ್ಯಮಾಡಿ, ಈ ದುಷ್ಕಾರ್ಯಗಳಿಂದ ನನಗೇನೂ ಬಾಧಕವಿಲ್ಲವೆಂದು ತನ್ನ ಮನಸ್ಸಿನಲ್ಲಿ ಯೋಚಿಸಕೂಡದು, ಯಾತಕ್ಕಂದರೆ ಒಂದು ಮಡಿಕೆಗೆ ಮಳೆ ಹನಿಯು ಒಂದೊಂದಾಗಿ ಬಿದ್ದರೂ ಹ್ಯಾಗೆ ತುಂಬಿಹೋಗುವದೊ ಅದರಂತೆ ಮನುಷ್ಯನು ಒಂದೊಂದು ಪಾಪಕೃತ್ಯಗಳು ಏನು ಮಾಡ್ಯಾವೆಂದು ಅಲಕ್ಷ್ಯಮಾಡಿದಲ್ಲಿ ಒಂದೊಂದು ಪಾಪಗಳಾಗಿ ಸೇರಿ ಪೂರ್ಣ ಪಾಪಿಷ್ಠನನ್ನಾಗಿ ಮಾಡಿ ಪೂರ್ಣ ದುಃಖವನ್ನುಂಟುಮಾಡುತ್ತವೆ.

(೨೧) ಯಾವ ಮನುಷ್ಯನೂ ಸುಕೃತಗಳ ವಿಷಯದಲ್ಲಿ ಅಲಕ್ಷ್ಯ ಮಾಡಿ ಇವುಗಳಿಂದ ನನಿಗೇನೂ ಸಂತೋಷ ಉಂಟಾಗಲಾರದೆಂದು ಯೋಚಿಸಕೂಡದು. ಯಾತಕ್ಕಂದರೆ ಒಂದು ಮಡಿಕೆಗೆ ಮಳೆ ಹನಿಯು ಒಂದೊಂದಾಗಿ ಬಿದ್ದರೂ ಹ್ಯಾಗೆ ತುಂಬಿಹೋಗುವದೊ ಅದರಂತೆ ಮನುಷ್ಯನು ಒಂದೊಂದು ಸುಕೃತದಿಂದ ಯೇನು ಸಂತೋಷ ಉಂಟಾದೀತೆಂದು ಅಲಕ್ಷ್ಯಮಾಡಿದಾಗ್ಯೂ ಆ ಸುಕೃತಗಳೆಲ್ಲಾ ಒಂದೊಂದಾಗಿ ತುಂಬಿ ಅವನಿಗೆ ಪೂರ್ಣವಾದ ಸಂತೋಷವನ್ನುಂಟುಮಾಡುತ್ತವೆ.

(೨೨) ಯಾವ ಮನುಷ್ಯನು ತನ್ನ ಇಂದ್ರಿಯಗಳ ತೃಪ್ತಿಗೇ ಮುಖ್ಯವಾಗಿ ಕಾಲಕಳೆಯುತ್ತಾ ತನ್ನ ಇಂದ್ರಿಯಗಳನ್ನು ನಿಗ್ರಹಮಾಡದೇ ಮತ್ತು ಮಿತಾಹಾರದಲ್ಲಿ ಇರದೇ, ಮತ್ತು ಸೋಮಾರಿಯಾಗಿಯೂ, ದುರ್ಬಲವುಳ್ಳವನಾಗಿಯೂ ಇರುತ್ತಾನೊ ಅವನನ್ನು ಘಾಳಿಯು ಬುಡಭದ್ರವಿಲ್ಲದ ಮರವನ್ನು ಹ್ಯಾಗೆ ಮುರಿದು ಕೆಳಕ್ಕೆ ಕೆಡವುವದೊ ಅದರಂತೆ ಮಾರನು (ಅಂದರೆ ಸ್ತ್ರೀಮೋಹಾದಿ ಮುಂತಾದವುಗಳು) ಸಂಸಾರವೆಂಬ ಬಲೆಯಲ್ಲಿ ಕೆಡುವುವನು. ಮತ್ತು ಯಾವ ಮನುಷ್ಯನು ಇಂದ್ರಿಯ ತೃಪ್ತಿಗೇ ಗಮನಕೊಡದೆ, ಜಿತೇಂದ್ರಿಯನಾಗಿಯೂ ಮಿತಾಹಾರಿಯಾಗಿಯೂ, ಮತ್ತು ಜ್ಞಾನದಿಂದಲೂ, ಬಲದಿಂದಲೂ ಕೂಡಿದವನಾಗಿ ಇರುತ್ತಾನೊ ಅವನನ್ನು ಘಾಳಿಯು ದೊಡ್ಡ ಭಂಡೆಗಳಿಂದ ಕೂಡಿದ ಪರ್ವತವನ್ನು ಹ್ಯಾಗೆ ಮುರಿದು ಕೆಡವಲಾರದೊ ಅದರಂತೆ ಮಾರನು ಸಂಸಾರವೆಂಬ ಬಲೆಯಲ್ಲಿ ಕೆಡವಲಾರನು.

(೨೩) ಅವಿವೇಕಿಯಾದ ಮನುಷ್ಯನು ತನ್ನ ಅವಿವೇಕವನ್ನು ತಿಳಿದುಕೊಂಡಲ್ಲಿ ಅವನನ್ನು ಬುದ್ಧಿವಂತನೆಂದೇ ಭಾವಿಸಬೇಕು. ಆದರೆ ಯಾವ ಅವಿವೇಕಿಯು ತನ್ನ ಅವಿವೇಕವನ್ನು ಜಾಣತನವೆಂದು ಭಾವಿಸುತ್ತಾನೋ ಅವನು ನಿಜವಾಗಲೂ ಅವಿವೇಕಿಯೇ.

(೨೪) ಪಾಪಿಷ್ಠ ಮನುಷ್ಯನಿಗೆ ತಾನು ಮಾಡುವ ಪಾಪಗಳು ಜೇನುತುಪ್ಪದಂತೆ ಮಧುರವಾಗಿ ತೋರುತ್ತದೆ ; ಮತ್ತು ಅದು ಅವನಿಗೆ ತಕ್ಕ ಫಲವನ್ನು ಕೊಡುವವರಿವಿಗೂ ಸಂತೋಷವೆಂದೇ ಭಾವಿಸುತ್ತಾನೆ ; ಆದರೆ ಅದು ಫಲಿಸಿ ಇವನಿಗೆ ದೀರ್ಘದುಃಖವನ್ನುಂಟು

ಮಾಡಿದಾಗ ಅಯ್ಯೋ ! ಇದು ಪಾಪಕೃತ್ಯವೆಂದು ಚಿಂತಿಸುತ್ತಾನೆ. ಅದ ರಂತೆಯೇ ಸನ್ಮಾರ್ಗಿಯು ತಾನು ಮಾಡುವ ಧರ್ಮವು ತನಗೆ ಒಳ್ಳೇ ಫಲವನ್ನುಂಟುಮಾಡುವ ವರಿವಿಗೂ ಅದನ್ನು ತನಗೆ ಒಂದು ತೊಂದರೆ ಎಂದು ಭಾವಿಸುತ್ತಾನೆ ; ಆದರೆ ಅದು ಒಳ್ಳೇ ಫಲವನ್ನುಂಟುಮಾಡಿದ ಒಡನೆಯೇ ಅದರ ಸದ್ಗುಣವು ಇವನಿಗೆ ವ್ಯಕ್ತವಾಗುವದು.

(೧೪) ಒಬ್ಬ ದ್ವೇಷಸ್ವಭಾವವುಳ್ಳ ಮನುಷ್ಯನು ಇತರ ದ್ವೇಷಿಯ ವಿಷಯದಲ್ಲಿ ದ್ವೇಷವನ್ನು ಮತ್ತು ತೊಂದರೆಯನ್ನುಂಟುಮಾಡುವದು ಸಹಜವು ; ಆದರೆ ಅವಿವೇಕದಿಂದ ಕೂಡಿದ ಮನುಷ್ಯನು ತನಗೆ ತಾನೇ ದ್ವೇಷಿಯಾಗಿಯೂ,ತೊಂದರೆಯನ್ನುಂಟುಮಾಡಿಕೊಳ್ಳುವವನಾಯೂ ಆಗುತ್ತಾನೆ. ಮತ್ತು ತಾಯಿ. ತಂದೆ, ಅಥವಾ ಇತರ ಬಂಧುಗಳು ಒಬ್ಬರಿಗೊಬ್ಬರು (ಪರಸ್ಪರ) ಒಳ್ಳೆಯದನ್ನು ಮಾಡುವದು ಸಹಜವು ; ಆದರೆ ವಿವೇಕಶಾಲಿಯಾದ ಮನುಷ್ಯನು ಒಬ್ಬರ ಸಹಾಯವನ್ನಪೇಕ್ಷಿಸದೆ ತನಗೆ ತಾನೇ ಬಂಧುವಾಗಿಯೂ, ಸಹಾಯಮಾಡಿಕೊಳ್ಳುವವನಾಗಿಯೂ ಆಗುತ್ತಾನೆ.

(೧೫) ಯಾವ ಮನುಷ್ಯನ ದುಷ್ಕೃತ್ಯಗಳು ಇತರ ಒಳ್ಳೆ ಮನುಷ್ಯರ ವಿಷಯದಲ್ಲಿ ಅಧಿಕವಾಗಿರುತ್ತದೆಯೋ ಆ ದುಷ್ಕೃತ್ಯಗಳೇ ಅವನನ್ನು ಹೀನಸ್ಥಿತಿಗೆ ತಂದು ತಾನೇ ತನ್ನ ಶತ್ರುಗಳ ವಶವಾಗುವಂತೆ ಮಾಡುತ್ತವೆ ; ಮತ್ತು ತನಗೆ ತಾನೇ ಕ್ರೂರವಾದ ದ್ವೇಷಿಯಾಗುತ್ತಾನೆ ; ಯಾವ ರೀತಿಯಲ್ಲೆಂದರೆ : ಮರವು ತನ್ನನ್ನು ಆಶ್ರಯಿಸಿದ್ದ ಬಳ್ಳಿಯಿಂದ ತಾನೇ ಹ್ಯಾಗೆ ನಾಶಹೊಂದುವದೋ ಅದರಂತೆಯೇ ದುಷ್ಟನು ತನ್ನಲ್ಲಿ ಇರತಕ್ಕ ದುಷ್ಟತನದಿಂದಲೇ ನಾಶವನ್ನು ಹೊಂದುತ್ತಾನೆ.

(೧೬) ಇಂದ್ರಿಯಗಳಿಗೆ ಸೌಖ್ಯವನ್ನುಂಟುಮಾಡುವ ವಿಷಯಗಳಿಗೆ ಮನಸ್ಸನ್ನು ಕೊಡಬೇಡ ! ಯಾತಕ್ಕೆಂದರೆ—ಆ ಸೌಖ್ಯವಾದ ನಂತರ ಉಂಟಾಗುವ ತೊಂದರೆ (ರೋಗಾದಿಗಳು) ಯಿಂದ ದುಃಖಪಡುತ್ತಾ "ಅಯ್ಯೋ ! ಇದು ಮಹಾಯಾತನೆ ಎನ್ನುತ್ತಿ ! ಅದರಂತೆ

ಯೇ ಕಾಮುಕನು ತನ್ನ ಮೋಹವೆಂಬ ಬೆಂಕಿಯಿಂದಲೇ ತಾನು ದಹಿಸಿಹೋಗುತ್ತಾನೆ.

(೨೮) ಅವಿವೇಕಿಗಳನ್ನು ಅವರ ಸುಖದ ಆಶೆಯೇ ನಾಶಮಾಡುವದು; ಅದರಂತೆಯೇ ಅವಿವೇಕಿಗಳು ಸಂಭೋಗಾದಿ ಸುಖಗಳಿಗೆ ಆಶೆಪಟ್ಟು ಅದರಿಂದ ತಾವೇ ನಾಶಹೊಂದಿ ತಮಗೆ ತಾವೇ ಶತ್ರುಗಳಾಗುತ್ತಾರೆ; ಅದು ಯಾವರೀತಿಯಲ್ಲೆಂದರೆ :—ಬೆಳೆಯಾಗುವ ಹೊಲಗಳು ಬಿರುಘಾಳಿಯಿಂದಲೂ, ಕಳೆ (ಉಪಯೋಗವಿಲ್ಲದ ಸಣ್ಣ ಗಿಡಗಳು) ಗಳಿಂದಲೂ ನಾಶಹೊಂದುವಂತೆ ಮನುಷ್ಯನು ಮೋಹದಿಂದಲೂ, ದ್ವೇಷದಿಂದಲೂ, ಗರ್ವದಿಂದಲೂ, ಮತ್ತು ದುರಾಶೆಯಿಂದಲೂ ಸಹಾ ನಾಶವಾಗುತ್ತಾನೆ.

(೨೯) ಯಾವ ಮನುಷ್ಯನೇ ಆಗಲಿ ಇದು ಸುಖ, ಇದು ದುಃಖವೆಂಬದಾಗಿ ಯೋಚಿಸಲಾಗದು. ಯಾತಕ್ಕೆಂದರೆ ಸುಖದ ಆಶೆಯು ದುಃಖವನ್ನುಂಟು ಮಾಡುವದು; ಮತ್ತು ದುಃಖದ ಯೋಚನೆಯು ಭಯವನ್ನುಂಟುಮಾಡುವದು; ಆದಕಾರಣ ಯಾವನಿಗೆ ಸುಖದ ಆಶೆಯು ಮತ್ತು ದುಃಖದ ಯೋಚನೆಯು ಸಹಾ ಇರುವದಿಲ್ಲವೋ ಅವನಿಗೆ ಚಿಂತೆಯೂ ಇಲ್ಲಾ; ಭಯವೂ ಇಲ್ಲಾ.

(೩೦) ಯಾವ ಮನುಷ್ಯನು ತನ್ನ ಜನ್ಮದ ಮುಖ್ಯೋದ್ದೇಶವನ್ನು ಮರತು, ನಿಷ್ಪ್ರಯೋಜನವಾಗಿ ಕಾಲಕಳೆಯುತ್ತಾ ಇರುತ್ತಾನೋ, ಮತ್ತು ಸತ್ಯಜ್ಞಾನವಿಲ್ಲದೆ ಇರುತ್ತಾನೋ, ಮತ್ತು ಇಂದ್ರಿಯ ಸೌಖ್ಯಂಗಳಲ್ಲಿ ಬುದ್ಧಿಯುಳ್ಳವನಾಗಿ ಇರುತ್ತಾನೋ ಅಂಥಾವನು ಕಾಲಾನಂತರ ಜ್ಞಾನಸಂಪಾದಿಸಿದವರನ್ನು ಕಂಡು ಅಸೂಯೆ ಪಡುತ್ತಾನೆ. (ತಾನು ಜ್ಞಾನಸಂಪಾದಿಸಲಿಲ್ಲವಲ್ಲಾ, ಇತರರು ಸಂಪಾದಿಸಿರುವರಲ್ಲಾ ಎಂದು ಹೊಟ್ಟೆಕಿಚ್ಚು ಪಡುವದು).

(೩೧) ಮನುಷ್ಯನು ಇತರರ ತಪ್ಪುಗಳನ್ನು ಕಂಡು ಹಿಡಿಯುವದರಲ್ಲಿ ಸಮರ್ಥನಾಗಿರುತ್ತಾನೆ. ಆದರೆ ತನ್ನ ಸ್ವಂತ ತಪ್ಪುಗಳನ್ನು ಕಂಡು ಹಿಡಿಯುವದು ತುಂಬಾ ದುರ್ಲಭವು. ಆದಕಾರಣ ಮನುಷ್ಯನು ಇತರರ ತಪ್ಪುಗಳನ್ನು ಮಂದರಿಯಾಡುತ್ತಾನೆ (ಬಳ್ಳೆಗೂಣವ

ನ್ನೆಲ್ಲಾ ಬಿಟ್ಟು ತಪ್ಪನ್ನೇ ಕಂಡು ಹಿಡಿಯುವದು) ಆದರೆ ತನ್ನ ಸ್ವಂತ ತಪ್ಪುಗಳನ್ನು, ಮೋಸವುಳ್ಳ ಜೂಜುಗಾರನು ತನ್ನ ದಾಳಗಳನ್ನು ಮುಚ್ಚಿಡುವಂತೆ ಗೋಪ್ಯಪಡಿಸುತ್ತಾನೆ.

(೩೦) ಮನುಷ್ಯನು ಇತರರ ತಪ್ಪನ್ನೇ ಕಂಡು ಹಿಡಿಯುವದರಲ್ಲಿಯೇ ನಿರತನಾಗಿದ್ದಲ್ಲಿ, ಇತರರ ಒಳ್ಳೆ ಗುಣವನ್ನು ಕಂಡು ಹಿಡಿದು ಸಂತೋಷಪಡುವ ಯೋಗ್ಯತೆಯೇ ಇಲ್ಲದೆ ಹೋಗುವದಲ್ಲದೆ ತಾನೂ ದುರ್ಗುಣವುಳ್ಳವನಾಗುತ್ತಾನೆ. ಆದಕಾರಣ ಇತರರ ತಪ್ಪನ್ನು ಎಂದಿಗೂ ಎಣಿಸಬಾರದು.

(೩೩) ಜ್ಞಾನಿಯಾದವನು ಇತರರನ್ನು ಇದನ್ನು ಮಾಡಿ, ಇದನ್ನು ಬಿಡಿ, ಎಂದು ಹೇಳಿ ತಿದ್ದುವದಕ್ಕೆ ಬದಲಾಗಿ, ತಾನು ಯಾವದು ಮಾಡಬೇಕೋ, ಯಾವದನ್ನು ಬಿಡಬೇಕೋ ಅದನ್ನು ತಿಳಿದು, ತನ್ನನ್ನು ತಾನೇ ತಿದ್ದಿಕೊಳ್ಳಲಿ.

(೩೪) ಮಂಜಿನಿಂದ ಮುಚ್ಚಿದ ಪರ್ವತವು ದೂರದಲ್ಲಿ ಇದ್ದಾಗ್ಯೂ ಹ್ಯಾಗೆ ಗಂಭೀರವಾಗಿ ಕಾಣಬರುವದೋ ಅದರಂತೆ ಸಜ್ಜನರು ದೂರದಲ್ಲಿ ಇದ್ದಾಗ್ಯೂ ಪ್ರಕಾಶಿಸುತ್ತಾರೆ; ಆದರೆ ಕೆಟ್ಟ ಮನುಷ್ಯರು ಹತ್ತಿರದಲ್ಲಿ ಇದ್ದಾಗ್ಯೂ ರಾತ್ರಿ ಕಾಲದಲ್ಲಿ ಬಿಟ್ಟ ಅಸ್ತ್ರವು ಹ್ಯಾಗೆ ಕಾಣುವದಿಲ್ಲವೋ ಅದರಂತೆ ಪ್ರಕಾಶಿಸುವದಿಲ್ಲಾ.

(೩೫) ಯಾವ ಮನುಷ್ಯನಾದರೂ ಸ್ವಾರ್ಥತೆಯಿಂದ ಕೂಡಿದವನಾಗಿ ಇತರರಿಗೆ ಹಾನಿಯನ್ನುಂಟುಮಾಡಿ, ತಾನು ಸಂತೋಷಪಡಬೇಕೆಂದು ಯೋಚಿಸಿದಲ್ಲಿ ಇವನು ತನ್ನ ದುರ್ಗುಣವನ್ನು ಅಸೂಯೆಯನ್ನು ಎಂದಿಗೂ ಬಿಡುವದಿಲ್ಲಾ.

(೩೬) ಮನುಷ್ಯನು ವಿಶ್ವಾಸದಿಂದ ಕೋಪವನ್ನು ಜೈಸಲಿ, ಮತ್ತು ಒಳ್ಳೆತನದಿಂದ ದುಷ್ಟತ್ವವನ್ನು ಜೈಸಲಿ, ಮತ್ತು ಧಾರಾಳದಿಂದ ಕೃಪಣತ್ವವನ್ನು ಜೈಸಲಿ, ಮತ್ತು ಸತ್ಯದಿಂದ ಅಸತ್ಯವನ್ನು ಜೈಸಲಿ.

(೩೭) ಯಾತಕ್ಕಂದರೆ ದ್ವೇಷವು ದ್ವೇಷದಿಂದ ಎಂದಿಗೂ ಶಾಂತಿಯಾಗುವದಿಲ್ಲಾ. ಆದರೆ ದ್ವೇಷವು ವಿಶ್ವಾಸದಿಂದ ಶಾಂತತೆಯನ್ನು ಹೊಂದುತ್ತದೆ. ಇದೇ ಸನಾತನ ಧರ್ಮವು.

(೩೮) ಸತ್ಯವನ್ನಾಡು, ಕ್ರೋಧಕ್ಕೆ ಒಳಗಾಗಬೇಡ, ಯಾರಾದರೂ ನಿನ್ನ ಸಹಾಯವನ್ನು ಅಪೇಕ್ಷಿಸಿದಲ್ಲಿ ಕೈಲಾದರೆ ಮಾಡು. ಈ ಮೂರು ಮಾರ್ಗಗಳನ್ನು ನೀನು ಅನುಸರಿಸಿದ್ದೇ ಆದರೆ ನೀನು ಖಂಡಿತವಾಗಲೂ ದೇವರೇ ಆಗುವೆ.

(೩೯) ಅಕ್ಕಸಾಲಿಗನು ಬೆಳ್ಳಿಯಲ್ಲಿ ಇರುವ ದೋಷವನ್ನು ಪುಟ ಹಾಕುವದರ ಮೂಲಕ ತೆಗೆದು ಹ್ಯಾಗೆ ಶುದ್ಧಿಮಾಡುತ್ತಾನೋ ಅದರಂತೆ ವಿವೇಕಿಯಾದವನು ತನ್ನಲ್ಲಿ ಇರುವ ದೋಷಗಳನ್ನು ಕ್ರಮಕ್ರಮೇಣ, ಒಂದೊಂದಾಗಿಯೂ, ಸ್ವಲ್ಪ ಸ್ವಲ್ಪವಾಗಿಯೂ ಕಳೆದು ಶುದ್ಧನಾಗಲಿ.

(೪೦) ಇತರರನ್ನು ಬಲಾತ್ಕರಿಸಿ ನಿನ್ನಂತೆ ಮಾಡಿಕೊಳ್ಳಬೇಡ, ಆದರೆ ವಿಶ್ವಾಸದಿಂದಲೂ, ಮತ್ತು ನ್ಯಾಯದಿಂದಲೂ ನಿನ್ನಂತೆ ಮಾಡಿಕೋ.

(೪೧) ಯಾವ ಮನುಷ್ಯನು ಒಳ್ಳೆ ನಡತೆಗಳನ್ನು ಮತ್ತು ವಿವೇಚನಾಶಕ್ತಿಯುಳ್ಳ ಬುದ್ಧಿವಂತಿಕೆಯನ್ನು ಮತ್ತು ನ್ಯಾಯಮಾರ್ಗವನ್ನು, ಮತ್ತು ಸತ್ಯತೆಯನ್ನು, ಮತ್ತು ತನ್ನ ಜನ್ಮದ ಮುಖ್ಯೋದ್ದೇಶವನ್ನು ಸಹಾ ಅನುಸರಿಸಿ ನಡೆಯುವನೋ ಅವನನ್ನು ಲೋಕದಲ್ಲಿ ಸರ್ವರೂ ಗೌರವಿಸುವರು.

(೪೨) ಜೇನುಹುಳುವು ಪುಷ್ಪಗಳ ಸೊಂಪನ್ನು ಮತ್ತು ಪರಿಮಳವನ್ನು ಕೆಡಿಸದಂತೆ ಹ್ಯಾಗೆ ಮಕರಂದವನ್ನು ಪಾನಮಾಡುತ್ತದೋ ಅದರಂತೆ ಜ್ಞಾನಿಯಾದವನು ತಾನು ವಾಸಮಾಡುವ ಗ್ರಾಮಕ್ಕೆ ಹಿಂಸೆಯನ್ನು ಕೇಡನ್ನು ಸಹಾ ಉಂಟುಮಾಡದಂತೆ ಸೌಮ್ಯದಿಂದ ವಾಸಮಾಡಲಿ.

(೪೩) ಪ್ರಯಾಣಮಾಡುವ ಮನುಷ್ಯನು ದಾರಿಯಲ್ಲಿ ತನಗಿಂತಲೂ ಬುದ್ಧಿಶಾಲಿಯಾದ, ಅಥವ ತನ್ನ ಸಮಾನ ಬುದ್ಧಿಯುಳ್ಳ ಮನುಷ್ಯನು ಸಿಕ್ಕದೇ ಇದ್ದಲ್ಲಿ ಗಂಭೀರದಿಂದ ಒಂಟಿಯಾಗಿ ಪ್ರಯಾಣ ಮಾಡಲಿ ; ಯಾತಕ್ಕೆಂದರೆ ಅವಿವೇಕಿಯ ಸಂಗಡ ವಿವೇಕಿಯು ಎಂದಿಗೂ ಸೇರಕೂಡದು.

(೪೪) ನಿದ್ರೆಬಾರದ ಮನುಷ್ಯನಿಗೆ ರಾತ್ರಿಯು ಹ್ಯಾಗೆ ದೀರ್ಘವಾಗಿರುವದೋ, ದುರ್ಬಲನಾದ ಮನುಷ್ಯನಿಗೆ ಒಂದು ಮೈಲಿಯು ಹ್ಯಾಗೆ ಒಂದು ಗಾವುದವಾಗುವದೋ, ಅದರಂತೆಯೇ ಜ್ಞಾನಿಯಲ್ಲದ ಮೂಢನು "ನಿರ್ವಾಣವನ್ನು ಹೊಂದುವದಕ್ಕೆ ಅನೇಕ ಜನ್ಮಗಳು ಬೇಕು" ಎಂದು ಯೋಚಿಸುತ್ತಾನೆ.

(೪೫) ಸತ್ಯವಸ್ತುವು ಲೋಕದಲ್ಲಿ ಒಂದಲ್ಲದೆ ಅನೇಕವೆಂದಿಗೂ ಇಲ್ಲಾ.

(೪೬) ಎಲೈ ಮುಮುಕ್ಷುಗಳೇ (ಮುಕ್ತಿಯನ್ನು ಹೊಂದಬೇಕೆಂಬುವರು) ಆಶ್ರಮಗಳಿಂದಲೇ ಆಗಲಿ ಅಥವಾ ವೇದಮುಂತಾದ ಅಪರಿಮಿತ ಪಾಂಡಿತ್ಯದಿಂದಲೇ ಆಗಲಿ ಅಥವಾ ಪ್ರಾಣಿಗಳನ್ನು ಬಲಿಕೊಡುವದರಿಂದಲೇ ಆಗಲಿ, ನಾನು ಸಂಸಾರದಿಂದ ನಿವೃತ್ತನಾಗಿ ಮನುಷ್ಯರಿಗೆ ಅಸಾಧ್ಯವಾದ ಸೌಖ್ಯವನ್ನು ಹೊಂದುತ್ತೇನೆಂದು ಯೋಚಿಸಬೇಡ ; ಯಾತಕ್ಕಂದರೆ ಇವುಗಳಿಂದ ಆಶೆಯು ಹೆಚ್ಚಾಗಿ, ಅದರಿಂದ ಪುನಹ ದುಃಖ ಉಂಟಾಗುತ್ತದೆ. ಆದ ಪ್ರಯುಕ್ತ ಸರ್ವದರಲ್ಲಿಯೂ ಆಶೆಯನ್ನು ಬಿಡುವದೇ ಅತ್ಯುತ್ತಮವಾದ ತತ್ವವು.

(೪೭) ತತ್ವವು (ಮತವು) ಎಲ್ಲಾ ಐಶ್ವರ್ಯಕ್ಕಿಂತಲೂ ಉತ್ತಮವಾದ ಐಶ್ವರ್ಯವು ; ತತ್ವವೇ ಮಧುರವಾದ ಪದಾರ್ಥಗಳಿಗಿಂತಲೂ ಮಧುರವಾದದ್ದು; ತತ್ವವೇ ಎಲ್ಲಾ ಸಂತೋಷಗಳಿಗಿಂತ ಅತ್ಯುತ್ತಮವಾದ ಸಂತೋಷವು. ಇಂಥಾ ತತ್ವವು ಕಾಮವನ್ನು ಬಿಟ್ಟಲ್ಲಿ ಲಭಿಸುವದೇ ವಿನಹಾ ಇನ್ಯಾತರಿಂದಲೂ ಲಭಿಸಲಾರದು.

(೪೮) ಸಂಸಾರವೆಂಬ ನದಿಯನ್ನು ದಾಟಬೇಕೆಂದು ಯೋಚಿಸಿ ದಾಟತಕ್ಕವರು ಬಹಳ ಅಪರೂಪವು ; ಆದರೆ ಮಿಕ್ಕಾದ ಅಸಂಖ್ಯಾತ ಜನರು ದಡದಮೇಲಕ್ಕೆ ಹತ್ತುವದು ಇಳಿಯುವದು ಈ ರೀತಿ ಆಯಾಸಪಡುತ್ತಾರೆ. ಆದರೆ ನದಿಯನ್ನು ದಾಟಿದ ಮನುಷ್ಯನಿಗೆ ಯಾವ ಆಯಾಸವೂ ಇಲ್ಲಾ.

(೪೯) ದುರ್ಗಂಧವುಳ್ಳ ಮತ್ತು ಕಶ್ಮಲವಾದ ಕೆಸರಿನಲ್ಲಿ ಬೆಳೆದಾಗ್ಯೂ ತಾವರೆಯು ನಿರ್ಮಲವಾಗಿಯೂ, ಸುವಾಸನೆಯುಳ್ಳದ್ದಾಗಿಯೂ ಹ್ಯಾಗೆ ಇರುವದೋ ಅದರಂತೆ ಬುದ್ಧನ ಶಿಷ್ಯನು (ಜ್ಞಾನಿಯಾದವನು) ಅಜ್ಞಾನದಿಂದಲೂ, ಅವಿವೇಕದಿಂದಲೂ ಕೂಡಿದ ಪ್ರಾಪಂಚಿಕರ ಜೊತೆಯಲ್ಲಿ ಇದ್ದಾಗ್ಯೂ ಕಮಲದಂತೆ ಪರಿಶುದ್ಧನಾಗಿಯೂ ಜ್ಞಾನಿಯಾಗಿಯೂ ವಾಸಮಾಡಲಿ.

(೫೦) ಹಾಗಾದಲ್ಲಿ ದ್ವೇಷಿಗಳ ಮಧ್ಯದಲ್ಲಿ ವಾಸವಾಗಿದ್ದರೂ, ದ್ವೇಷಿಗಳು ನಮ್ಮನ್ನು ದ್ವೇಷಿಸಿದಾಗ್ಯೂ ಅವರನ್ನು ನಾವು ದ್ವೇಷಿಸದೇ ಸುಖವಾಗಿರೋಣ.

(೫೧) ಹಾಗಾದಲ್ಲಿ ದುಃಖಪಡುವವರ ಮಧ್ಯದಲ್ಲಿ ವಾಸವಾಗಿದ್ದರೂ ದುಃಖಿಗಳು ನಮ್ಮನ್ನು ದುಃಖಗೊಳಿಸಿದಾಗ್ಯೂ ನಾವು ಅವರನ್ನು ದುಃಖಗೊಳಿಸದೆ ಸುಖವಾಗಿರೋಣ.

(೫೨) ಹಾಗಾದರೆ ಆಶೆಪಡುವವರ ಮಧ್ಯದಲ್ಲಿ ವಾಸವಾಗಿದ್ದರೂ ಆಶೆಗಾರರು ನಮ್ಮನ್ನು ಆಶೆಪಡಿಸಿದಾಗ್ಯೂ ನಾವು ಆಶೆಪಡಿಸದೆ ಮತ್ತು ನಾವೂ ಆಶೆಪಡದೆ ಸುಖವಾಗಿರೋಣ.

(೫೩) ಸತ್ಯವಸ್ತುವಿನಲ್ಲಿ ಯಾವ ಧರ್ಮವೇ ಆಗಲಿ, ಯಾವ ರೂಪುಗಳೇ ಆಗಲಿ, ಯಾವ ಹೆಸರುಗಳೇ ಆಗಲಿ, ಎಂದಿಗೂ ಇಲ್ಲವು.

(೫೪) ಸೂರ್ಯನು ಹಗಲುವೇಳೆ ಪ್ರಕಾಶಮಾನವಾಗಿರುತ್ತಾನೆ. ಚಂದ್ರನು ರಾತ್ರಿಯಲ್ಲಿ ಪ್ರಕಾಶಮಾನನಾಗಿರುತ್ತಾನೆ. ಯುದ್ಧ ಮಾಡುವ ಶೂರನು ತನ್ನ ವಜ್ರಕವಚವನ್ನು ಹಾಕಿಕೊಂಡಿರುವಾಗ ಪ್ರಕಾಶಿಸುತ್ತಾನೆ. ವಿವೇಕಿಯು ಆಲೋಚನಾಶಕ್ತಿಯುಳ್ಳಾಗ ಪ್ರಕಾಶಿಸುತ್ತಾನೆ. ಆದರೆ ಎಲ್ಲಾ ಪ್ರಕಾಶಗಳಿಗಿಂತಲೂ ಹಗಲೂ ರಾತ್ರಿಯಲ್ಲೂ ಪ್ರಕಾಶಿಸುತ್ತಾ ಶುದ್ಧನಾಗಿಯೂ, ಜ್ಞಾನಿಯಾಗಿಯೂ, ಸರ್ವಪೂಜ್ಯನಾಗಿಯೂ ಇರುವನು ಬುದ್ಧನು (ಜ್ಞಾನಿಯು).

## ಬುದ್ಧನು ಭಿಕ್ಷುಗಳು ಸ್ತ್ರೀಯರ ವಿಷಯದಲ್ಲಿ ಹ್ಯಾಗೆ ನಡೆಯಬೇಕೆನ್ನುವದನ್ನು ಹೇಳುತ್ತಾನೆ.

(೧) ಸ್ತ್ರೀಯರನ್ನು ನೋಡುವ ವಿಷಯದಲ್ಲಿ ಮನಸ್ಸನ್ನು ಹಿಂತೆಗಿ.

(೨) ಸ್ತ್ರೀಯನ್ನು ನೀನು ಬಂದುವೇಳೆ ನೋಡಿದಾಗ್ಯೂ ನೋಡದವನಂತೆ ಇರಲಿ, ಅವರೊಡನೆ ಸಂಭಾಷಣೆ ಮಾಡಬೇಡ.

(೩) ಬಂದುವೇಳೆ ಸ್ತ್ರೀಯೊಡನೆ ಮಾತನಾಡಬೇಕಾದ ಸಂಭವವು ಪ್ರಾಪ್ತವಾದಲ್ಲಿ "ಪರಿಶುದ್ಧವಾದ ಹೃದಯದಿಂದ ಮಾತನಾಡು, ಮತ್ತು ತಾವರೆ ಎಲೆಯು ಕಶ್ಮಲವಾದ ಕೆಸರಿನಲ್ಲಿ ಬೆಳೆದಾಗ್ಯೂ ಆ ಕಶ್ಮಲಕ್ಕೆ ತಾನು ಹ್ಯಾಗೆ ಅಂಟದೆ ಇರುವದೋ ಅದರಂತೆ ಈ ಮೋಹಾವೃತವಾದ ಪ್ರಪಂಚದಲ್ಲಿ ಇದ್ದಾಗ್ಯೂ ಮೋಹರಹಿತನಾಗಿ ಇರುತ್ತೇನೆಂದು ಭಾವಿಸು.

(೪) ಸ್ತ್ರೀಯು ವೃದ್ಧೆಯಾಗಿದ್ದಲ್ಲಿ ನಿಮ್ಮ ತಾಯಿಯಂತೆ ಭಾವಿಸು. ತರುಣಿಯಾಗಿದ್ದಲ್ಲಿ ನಿನ್ನ ಸಹೋದರಿಯಂತೆ ಭಾವಿಸು. ಕೇವಲ ಕನ್ಯೆಯಾಗಿದ್ದಲ್ಲಿ ನಿನ್ನ ಮಗುವಿನಂತೆ ಭಾವಿಸು.

(೫) ಜ್ಞಾನಿಯಾದವನು ಸ್ತ್ರೀಯನ್ನು ಸ್ತ್ರೀಯೆಂದು ಭಾವಿಸುತ್ತಾನೋ ಅಥವಾ ಸ್ತ್ರೀಯೆಂದು ಸ್ಪರ್ಶಮಾಡುತ್ತಾನೋ ಅವನು ತನ್ನ ಧರ್ಮವನ್ನು ನಾಶಮಾಡಿದವನಾಗುವದಲ್ಲದೆ ಎಂದಿಗೂ ಬುದ್ಧನ (ಜ್ಞಾನಿಯ) ಅನುವರ್ತಿಯೆನಿಸಿಕೊಳ್ಳುವದೇ ಇಲ್ಲ.

(೬) ಮೋಹಶಕ್ತಿಯು ಪ್ರಪಂಚದಲ್ಲಿ ಬಹಳವಾಗಿರುವದು. ಆದಕಾರಣ ಈ ವಿಷಯದಲ್ಲಿ ತುಂಬಾ ಹೆದರಿಕೆ ಇರಬೇಕು. ಅದಕ್ಕೋಸ್ಕರ ಜಿತಮನಸ್ಸೆಂಬ ಬಿಲ್ಲನ್ನೂ, ಮತ್ತು ಜ್ಞಾನವೆಂಬ ತೀಕ್ಷ್ಣವಾದ ಬಾಣವನ್ನೂ ನಿರಂತರದಲ್ಲೂ ಧರಿಸು.

(೭) ವಿವೇಕವೆಂಬ ವಜ್ರಕಿರೀಟ (ಯುದ್ಧದಲ್ಲಿ ತಲೆಯನ್ನು ಕಾಪಾಡಿಕೊಳ್ಳುವ ಲೋಹ ಮುಂತಾದ್ದರಿಂದ ಮಾಡಿದ ಕುಲಾವಿ) ವನ್ನು ಧರಿಸಿ, ನಾಶಹೇತುವಾದ ಪಂಚೇಂದ್ರಿಯಂಗಳೊಡನೆ ನಿಶ್ಚಂಚಲ ಮನಸ್ಸಿನಿಂದ ಯುದ್ಧಮಾಡು.

(೮) ಸ್ತ್ರೀಯ ಸೌಂದರ್ಯವು ಪುರುಷನ ಹೃದಯವನ್ನು ಅವಿವೇಕಕ್ಕೆ ಎಳೆದು ವಿಕಲ್ಪವನ್ನೂ ಅಜ್ಞಾನವನ್ನೂ ಸಹಾ ಉಂಟು ಮಾಡುತ್ತದೆ; ಮತ್ತು ಮನಸ್ಸನ್ನು ಮಂಕಾಗೊಳಿಸುತ್ತದೆ.

(೯) ಕಾದ ಕಬ್ಬಿಣವು ಕಣ್ಣಿಗೆ ತಗಲಿದಲ್ಲಿ ಕಣ್ಣು ಇಂಗಿ ಹೋಗುವದು. ಆದರೆ ಸ್ತ್ರೀಯನ್ನು ಒಂದಾವರ್ತಿ ಮೋಹದೃಷ್ಟಿಯಿಂದ ನೋಡಿದಲ್ಲಿ ಮನುಷ್ಯನೇ ಇಂಗಿಹೋಗುವನು.

(೧೦) ಕ್ರೂರವಾದ ಹುಲಿಯ ಬಾಯಿಗೆ ಸಿಕ್ಕಿ ಹಿಂತಿರುಗಿ ಬರಬಹುದು; ಮತ್ತು ಕಟುಕರವನ ತೀಕ್ಷ್ಣವಾದ ಆಯುಧದ ಘಾತಕ್ಕೆ ಒಳಗಾಗಿದ್ದರೂ ಹಿಂತಿರುಗಿ ಬರಬಹುದು ; ಆದರೆ ಕಾಮಿನಿಯಾದ ಸ್ತ್ರೀಯರ ಸೌಂದರ್ಯವೆಂಬ ಬೆಂಕಿಗೆ ಒಳಗಾಗಿ ಹಿಂತಿರುಗುವದು ದುರ್ಲಭವು.

(೧೧) ಪ್ರಾಪಂಚಿಕದ ಸ್ತ್ರೀಯು ತನ್ನ ರೂಪ ಲಾವಣ್ಯಗಳನ್ನು, ನಡಗೆಯ ವೈಯ್ಯಾರದ ಮೂಲಕವೇ ಆಗಲಿ, ನಿಂತುಕೊಳ್ಳುವ ಭಂಗಿಯ (ನಿಂತುಕೊಳ್ಳುವ ಸೊಗಸು) ಮೂಲಕವೇ ಆಗಲಿ, ಕೂತುಕೊಳ್ಳುವ ಚಂದದ ಮೂಲಕವೇ ಆಗಲಿ, ಮಲಗಿಕೊಳ್ಳುವ ಅಂದದ ಮೂಲಕವೇ ಆಗಲಿ, ವ್ಯಕ್ತಪಡಿಸುತ್ತಾಳೆ : ಮತ್ತು ಒಂದು ವೇಳೆ ಸ್ತ್ರೀಯು ಚಿತ್ರಪಟದಲ್ಲಿ ಕಾಣಿಸಿಕೊಂಡಾಗ್ಯೂ ಅಲ್ಲಿಯೂ ತನ್ನ ಸೌಂದರ್ಯವೆಂಬ ಬಲೆಯನ್ನು ಪುರುಷರ ಮೇಲೆ ಬೀಸಿ ಅವರ ಸ್ವತಂತ್ರಹೃದಯವನ್ನು ಮುತ್ತಿಗೆಹಾಕಿ ತನ್ನ ಮೋಹವೆಂಬ ಬಂಧನದಲ್ಲಿ ಕೆಡಹುವದಕ್ಕೆ ಪ್ರಯತ್ನಮಾಡುತ್ತಾಳೆ.

(೧೨) ಆದಕಾರಣ ಮನುಷ್ಯನು ಯಾವರೀತಿಯಲ್ಲಿ ಎಚ್ಚರಿಕೆಯಿಂದ ಇರಬೇಕೆಂದರೆ :—

(೧೩) ಸ್ತ್ರೀಯ ಕಣ್ಣೀರನ್ನೂ ಮತ್ತು ಅವಳ ಕೃತಕ ನಮ್ರತೆಯನ್ನೂ ಸಹಾ ಶತೃವಿನಂತೆ ಭಾವಿಸಬೇಕು. ಮತ್ತು ಮೃದುವಾಗಿರುವಂತೆ ತೋರುವ ಅವಳ ಅಂಗಭಾವವನ್ನು ಅವಳ ನೀಳವಾಗಿಯೂ, ಕೋಮಲವಾಗಿಯೂ ಇರುವ ಕೈಗಳನ್ನೂ, ಮತ್ತು ಅವಳ ದೀರ್ಘವಾದ ಮತ್ತು ಮನೋಹರವಾದ ಕೇಶಪಾಶ (ತಲೆ ಕೂದಲು

ಗಳು) ಗಳನ್ನೂ ಇವೇ ಮುಂತಾದವುಗಳೆಲ್ಲಾ ಪುರುಷರ ಹೃದಯವನ್ನು ಮೋಹವೆಂಬ ಸೆರೆಮನೆಗೆ ಬೀಳಿಸುವದಕ್ಕೆ ಸಹಾಯಕಾರಿಗಳಾದ ಸಲಕರಣೆಗಳೆಂದು ಭಾವಿಸಿ ಎಚ್ಚರಿಕೆಯಿಂದಿರಬೇಕು.

(೧೪) ಆದಕಾರಣ ನಿನ್ನ ಹೃದಯವನ್ನು ಭದ್ರಪಡಿಸು; ಇಂದ್ರಿಯಗಳ ಸಹವಾಸಕ್ಕೆ ಹೋಗಲು ನಿನ್ನ ಮನಸ್ಸಿಗೆ ಸ್ವತಂತ್ರವನ್ನು ಕೊಡಬೇಡ.

## ಬುದ್ಧನು ನಿರ್ವಾಣವನ್ನು ಹೊಂದುವ ಕಾಲದಲ್ಲಿ ಹೇಳಿದ ಅಂತ್ಯೋಕ್ತಿಗಳು.

(೧) ಮಿತ್ರರೇ, ನಾನು ಈ ಲೋಕವನ್ನು ಬಿಟ್ಟು ಹೋದನಂತರ ಪುನಹ ಈ ರೂಪಿನಿಂದ ಬೋಧೆಮಾಡುವದಕ್ಕೆ ಆಗುವದಿಲ್ಲ. ಆದಕಾರಣ ನನ್ನ ಮಾತುಗಳನ್ನು ಸರ್ವರೂ ದಯೆಯಿಂದ ಲಾಲಿಸಿ.

(೨) ಸರ್ವೋತ್ತಮವಾದ ತತ್ವ (ಸತ್ಯಮತ) ವನ್ನು ತಿಳಿಯದೇ ನೂರು ವರುಷಗಳು ಬದುಕುವದಕ್ಕೆ ಬದಲಾಗಿ, ಸರ್ವೋತ್ತಮವಾದ ತತ್ವವನ್ನು ತಿಳಿದು ಒಂದು ದಿವಸ ಬದುಕಿ ಮಾರನೇ ದಿವಸ ಸತ್ತಾಗ್ಯೂ ಉತ್ತಮವೆ.

(೩) ಪಂಚಭೂತಾತ್ಮಕವಾದ ಈ ದೇಹವೂ, ಮತ್ತು ಈ ಪ್ರಪಂಚವೂ ಸಹಾ ನಾಶವನ್ನು ಹೊಂದತಕ್ಕದ್ದಾಗಿದೆ. ಆದರೆ ಸತ್ಯವಸ್ತು ಒಂದೇ ನಿರಂತರದಲ್ಲೂ ನೆಲೆಯಾಗಿ ಇರತಕ್ಕದ್ದು. ಆದಕಾರಣ ಸತ್ಯವಸ್ತುವಿನಲ್ಲಿ ನಿರ್ವಾಣವನ್ನು ಹೊಂದುವದಕ್ಕೆ ಪ್ರಯತ್ನಪಡಿ ಎಂಬದಾಗಿ ಹೇಳಿ ಬುದ್ಧನು ಸಮಾಧಿಗತನಾಗಿ ನಿರ್ವಾಣಪದವಿಯನ್ನು ಹೊಂದಿದನು.

ಸಂಪೂರ್ಣಂ.

[redacted] ಗ್ರಂಥಕರ್ತರ ಹಸ್ತಾಕ್ಷರವಿಲ್ಲದ ಪುಸ್ತಕವನ್ನು ಯಾರೂ ತೆಗೆದುಕೊಳ್ಳಕೂಡದು.